ಶ್ರೀ ಭುವನೇಶ್ವರೀ ಗ್ರಂಥಮಾಲೆಯ ೫ನೆಯ ಪುಷ್ಪ

# ವರದಕ್ಷಿಣೆ.



ಬರಹಗಾರ— ಬಿ. ಕಲ್ಯಾಣಶರ್ಮಾ.

೧೯೩೩

ಬೆಲೆ—೬ ಆಣೆಗಳು

# ಮುಮ್ಮಾತು.



ಇದೊಂದು ವೇಷಾಂತರ ಮಾಡಿ ಬೈಲಿಗೆ ಬಂದ ವಾಙ್ಮಯ ಕೂಸು. ಇದರ ಪರಿಚಯವು ಕೆಲವರಿಗೆ ಈ ಮೊದಲೇ ಆಗಿದೆ. ಈ ಮಗುವಿನ ಕುಂದು ಕೊರತೆಗಳನ್ನೆಣಿಸದೆ, ಅಂದಗೇಡಿತನವನ್ನು ಅವಗಾಹನೆಗೆ ತಾರದೆ, ತನ್ನದೆಂಬ ಭಾವನೆಯಿಂದ ಎತ್ತಿ ಮುದ್ದಾಡಬೇಕೆಂದು ಕನ್ನಡಗರಿಗೆ ಕೈಮುಗಿದು, ಅದರ ಕರ್ತನು ಬಿನ್ನವಿಸುವನು.

**ಬೆಳಗಾವಿ.**
೧೨ ೬-೧೯೩೩



ಕನ್ನಡನುಡಿಯಾಳು
**ಬಿ. ಕಲ್ಯಾಣಶರ್ಮಾ**


ಮುದ್ರಕರು— **ಶ್ರೀ. ವೆಂಕಟೇಶ ಶ್ರೀನಿವಾಸ ಪಂಡಿತ** ಸೀತಾರಾಮ ಪ್ರಿಂಟಿಂಗ ಪ್ರೆಸ್ಸ ಹನುಮಾನ ಬೀದಿ ಮನೆನಂಬರು೧೫೬೦ ಬೆಳಗಾಂವಿ

ಪ್ರಕಾಶಕರು—**ಬಿ. ಕಲ್ಯಾಣಶರ್ಮಾ** ಸಂಪಾದಕ ಶ್ರೀಭುವನೇಶ್ವರಿ ಗ್ರಂಥ ಮಾಲೆ ಕಾರ್ಯಾಲಯ ಅನಂತಶಯನಬೀದಿ [ ಮನೆನಂಬರು. ]
೧೦೯೯

**ಬೆಳಗಾಂವಿ.**

# ವರದಕ್ಷಿಣೆ.



## ೧ನೆಯ ಪ್ರಕರಣ.

### ನಿರಾಶೆ.

ಪ್ರಾಯಶಃ ೪—೫ ಸಿಗೆಯ ದಿವಸಗಳು ಕಳೆಯುತ್ತಾಗಿ ದ್ದರೂ, ಬಿಸಲಿನ ತಾಪವು ಇನ್ನೂ ಕಡಿಮೆಯಾಗಿದ್ದಿಲ್ಲ. ಗವುಮ್ಮು ಆಗುತ್ತಲೇ ಇತ್ತು. ಎಷ್ಟೋ ಆಲಸ್ಯಗಾರರು, ಮಧ್ಯಾಹ್ನದ ವಾಮಕುಕ್ಷಿಯೆಂದು ಮಲಗಿಕೊಂಡವರು ಆಗ ಎದ್ದು, ಮೋರೆಯನ್ನು ತೊಳಕೊಳ್ಳಹತ್ತಿದ್ದರು. ಕೆಲವರು ಉಡುಪು-ತೊಡುಪುಗಳನ್ನು ಧರಿಸಿ, ತಮ್ಮ ತಮ್ಮ ಗೆಳೆಯರ ಮನೆಯ ಕಡೆಗೆ ಸಾಗಹತ್ತಿದ್ದರು. ದೇವಾಲಯಗಳಲ್ಲಿ ಪುರಾಣಿಕರು ಪುರಾಣವನ್ನೂ, ಕೀರ್ತನಕಾರರು ಕೀರ್ತನವನ್ನೂ ಹೇಳಲಾರಂಭಿಸಿದ್ದರು. ಕೆಲವು ಹೆಂಗಸರು ಕೈಯಲ್ಲಿ ಊದುಬತ್ತಿಯಿಂದ ಕೂಡಿದ ನೀರಾಜನವನ್ನೂ, ಅಕ್ಕಿಯಿಂದ ತುಂಬಿದ ಜಾಂಬವನ್ನೂ ಹಿಡುಕೊಂಡು, ಗುಡಿಯ ಹಾದಿಯನ್ನು ಹಿಡಿದಿದ್ದರು. ಯಾವನೋ ಒಬ್ಬ ಪ್ರಸಿದ್ಧ ಗೃಹಸ್ಥರ ವ್ಯಾಖ್ಯಾನವಿದ್ದದರಿಂದ ಶ್ರೀವಿಠ್ಠಲಮಂದಿರದ ಒಳಿಯಲ್ಲಿ ಜನರ ಸಂದಣಿಯಾಗಿತ್ತು. ಶಾಲೆಗಳು ಆಗಲೇ ಬಿಟ್ಟದ್ದರಿಂದ ಎಷ್ಟೋ ಪ್ರೌಢ-ವಿದ್ಯಾರ್ಥಿಗಳು ಹಾಕಿ, ಕ್ರಿಕೆಟ್, ಫುಟಬಾಲ, ಟೆನಿಸ ಮುಂತಾದ ಪಾಶ್ಚಾತ್ಯ ಆಟಗಳನ್ನೂ, ತಿಳ್ಳಿ, ಚೆಂಡು ಮೊದಲಾದ ದೇಶೀಯ ಆಟಗಳನ್ನೂ ಆಡುವ ಸಿದ್ಧತೆಯಲ್ಲಿದ್ದರು. ಚಿಕ್ಕ ಚಿಕ್ಕ ವಿದ್ಯಾರ್ಥಿಗಳು ಮನೆಯನ್ನು ಸೇರಿ, “ಅವ್ವಾ, ಹಸಿವೆಯಾಗಿದೆ. ಏನಾದರು ತಿನ್ನಲಿಕ್ಕೆ ಕೊಡು” ಎಂದು ತಾಯಿಯ ಬಳಿಯಲ್ಲಿ ಹಟ ಮಾಡಹತ್ತಿದ್ದರು. ಇಂಥ ವೇಳೆಯಲ್ಲಿ ಇಬ್ಬರು ಗೃಹಸ್ಥರು ಒಂದು

ದೊಡ್ಡ ಮನೆಯ ಮುಂದಿನ ಪ್ರಶಸ್ತವಾದ ಹಜಸಾಲೆಯಲ್ಲಿ ಮಾತಾಡುತ್ತ ಕುಳಿತುಕೊಂಡಿದ್ದರು ಅವರಲ್ಲಿ ಮುಂದೆ ಬರೆದಂತೆ ಸಂಭಾಷಣೆಯು ನಡೆದಿತ್ತು: —

" ರಘುನಾಥರಾಯರೇ, ಸಾಕು ಇನ್ನು ಹೆಚ್ಚಿಗೆ ಬಿಗಿಹಿಡಿಯ ಬೇಡಿರಿ ಏಳುನೂರು ರೂಪಾಯಿ ವರದಕ್ಷಿಣೆ, ಮುನ್ನೂರು ರೂಪಾಯಿ ವರೋಪಚಾರ ಹೀಗೆ ಒಟ್ಟಿಗೆ ಸಾವಿರ ರೂಪಾಯಿಗಳನ್ನು ಕೊಡುತ್ತೇನೆ; ಮತ್ತು ಲಗ್ನಸಮಾರಂಭದ ನಾಲ್ಕು ದಿವಸಗಳ ಎರಡೂ ಕಡೆಯ ವೆಚ್ಚ ವನ್ನಾದರೂ ನಾನೇ ನೋಡಿಕೊಳ್ಳುತ್ತೇನೆ ಇದಕ್ಕೂ ಹೆಚ್ಚಿನ ಯೋಗ್ಯತೆಯು ಮಾತ್ರ, ನನ್ನಲ್ಲಿಲ್ಲ; ಶರಗೊಡ್ಡಿ ಬೇಡಿಕೊಳ್ಳುತ್ತೇನೆ ಸಾವಿರಸಾರೆ ಕಾಲುಬೀಳುತ್ತೇನೆ. ಹೇಗಾದರು ಮಾಡಿ ನನ್ನ ಮಾತನ್ನು ಒಪ್ಪಿಕೊಳ್ಳಿರಿ." ಎಂದು ಶ್ರೀನಿವಾಸರಾಯರು ನಮ್ರತನದಿಂದ ನುಡಿದರು.

ರಘು— ಛೇ ಛೇ, ಶ್ರೀನಿವಾಸರಾಯರೇ, ಶರಗೊಡ್ಡುವ ಕಾರಣ ವೇನು? ಹೇಳಿಕೇಳಿ ಇದೊಂದು ವ್ಯಾಪಾರವು. ನಿಮ್ಮಲ್ಲಿ ಬೇಡಿದಷ್ಟು ವರದಕ್ಷಿಣೆಯನ್ನು ಕೊಡುವ ಯೋಗ್ಯತೆಯಿಲ್ಲದಿದ್ದರೆ, ಇಲ್ಲಿಯವರೆಗೆ ಯಾತಕ್ಕೆ ಬಂದಿರಿ? ನಾನು ನಾಲ್ಕು ಸಾವಿರ ಅನ್ನುತ್ತೇನೆ. ನೀವು ಒಂದು ಸಾವಿರ ಅನ್ನುತ್ತೀರಿ ಹೀಗೆ ಕಂಡಕಂಡಂತೆ ಮಾತಾಡಿದರೆ, ವ್ಯವ ಹಾರವು ಹೇಗೆ ಕೂಡಬೇಕು?

ಶ್ರೀನಿ—ನನ್ನಲ್ಲಿ ಅಷ್ಟು ಯೋಗ್ಯತೆಯಿಲ್ಲವಂತೇ, ನಿಮಗೆ ಇಷ್ಟು ಹೇಳಿಕೊಳ್ಳುತ್ತೇನೆ. ಇಲ್ಲದಿದ್ದರೆ ನಾನು ಒಮ್ಮೆಲೆ ನಿಮ್ಮ ಮಾತಿಗೆ ಒಪ್ಪಿಕೊಳ್ಳುತ್ತಿದ್ದೆ.

ರಘು—ನಿಮ್ಮಲ್ಲಿ ಯೋಗ್ಯತೆಯಿಲ್ಲವೆ? ತಿಂಗಳಿಗೆ ನೂರು ರೂಪಾಯಿ ಪೇನಶನ ದೊರೆಯುತ್ತದೆ, ಹೀಗಿದ್ದು ಯೋಗ್ಯತೆಯಿಲ್ಲವೆಂದು ಅನ್ನುವಿರಿ? ಒಟ್ಟಿನ ಮೇಲೆ ಕೈ ಬಿಚ್ಚಲಿಕ್ಕೆ ಬೇಡ ನಿಮ್ಮ ಹತ್ತರ ನಾನು ಹೆಚ್ಚಿಗೆ ವರದಕ್ಷಿಣೆಯನ್ನು ಬೇಡಿದಂತೆ ನನಗಂತೂ ತೋರುವದಿಲ್ಲ! ಮೊನ್ನೆ ೩ ರಾಣೆಬಿನ್ನೂರದ ರಾಮಚಂದ್ರಪಂತರು ಬಂದಿದ್ದರು ಅವರಿಗೆ ನಾನು ಏಳು ಸಾವಿರ ರೂಪಾಯಿ ಎಂದು ಹೇಳಿದ್ದೆ. ಅವರು ಮೂರು

ಸಾವಿರ ರೂಪಾಯಿಗಳನ್ನು ವೆಚ್ಚಮಾಡಲಿಕ್ಕೆ ಸಿದ್ಧರಾಗಿರುವರು. ನೀವು ಒಂದೇ ಸಾವಿರದಲ್ಲಿ ಎಲ್ಲವನ್ನು ತೀರಿಸಬೇಕನ್ನುತ್ತೀರಿ. ಇದು ಸರಿಯೇ? ನೀವೇ ಹೇಳಿರಿ. ನೀವು ನಮ್ಮ ಗೆಳೆಯರೆಂದು, ನಾನು ನಿಮಗೆ ಹೆಚ್ಚಿಗೆ ವರದಕ್ಷಿಣೆಯನ್ನು ಬೇಡಲಿಲ್ಲ.

ರಘುನಾಥರಾಯರು ಹೀಗೆ ಮಾತಾಡುತ್ತಿರುವಷ್ಟರಲ್ಲಿ ಬಾಗಿಲ ಮರೆಗೆ ನಿಂತ ಜಾನಕೀಬಾಯಿಯವರು ಪತಿಯನ್ನುದ್ದೇಶಿಸಿ—“ಕೇಳಿದಿರಾ, ಶ್ರೀನಿವಾಸರಾಯರು ನಾಲ್ಕು ಸಾವಿರ ರೂಪಾಯಿಗಳನ್ನು ಕೊಡಲಿಕ್ಕೆ ಒಪ್ಪಿಕೊಂಡರೆ ಮಾತ್ರ, ಅವರಿಗೆ ನೀವು ವಚನವನ್ನು ಕೊಡಿರಿ; ಇಲ್ಲದಿದ್ದರೆ ನಮ್ಮ ನಿಮ್ಮ ವ್ಯವಹಾರವು ಕೂಡುವದಿಲ್ಲೆಂದು ಅವರಿಗೆ ನಿಶ್ಚಿತವಾಗಿ ಹೇಳಿರಿ. ಇಂಥ ಅಳುಬುರುಕತನವು ಯಾತಕ್ಕೆಬೇಕು? ಈಗ ಒಂದು ತಿಂಗಳಾಯಿತು. ಒಂದೇ ಸವನೆ ಈ ಶ್ರೀನಿವಾಸರಾಯರ ಸುದರ್ಶನವು ನಮ್ಮ ಬೆನ್ನು ಹತ್ತಿರುವದು! ನಾಳೆನಿಂದ ನಮ್ಮಲ್ಲಿ ಬಂದವರೆಲ್ಲ ನಾಲ್ಕು ಸಾವಿರ ರೂಪಾಯಿ ವರದಕ್ಷಿಣೆಯನ್ನು ಕೊಡುವ ಯೋಗ್ಯತೆಯಿದ್ದರೆ ಮಾತ್ರ, ಮುಂದೆ ಮಾತಾಡಿರಿ ಇಲ್ಲದಿದ್ದರೆ ಬಂದ ದಾರಿಯಿಂದ ಹೊರಟು ಹೋಗಿರಿ ಎಂದು ಹೇಳಬೇಕು. ನಮಗೇನು ಇದೊಂದೇ ಕೆಲಸವಿರುವದೋ? ನನ್ನ ಮಗನೇನು ಹಾದಿಯ ಮೇಲಿ ಬಿದ್ದಿಲ್ಲ, ಬಿ ಎ ಕ್ಲಾಸಿನಲ್ಲಿರುವನು, ಬಿ. ಎ. ಕ್ಲಾಸಿನಲ್ಲಿ!” ಎಂದು ತಮ್ಮ ಅಭಿಪ್ರಾಯವನ್ನು ವ್ಯಕ್ತಪಡಿಸಿದರು. ಆಗ ಶ್ರೀನಿವಾಸರಾಯರು ಗಂಭೀರಮುದ್ರೆಯಿಂದ—‘ರಘುನಾಥರಾಯರೇ, ನನಗೆ ಇವಳೊಬ್ಬಳೇ ಮಗಳಿದ್ದಿದ್ದರೆ, ನಾಲ್ಕು ಸಾವಿರ ಯಾಕೆ, ಹತ್ತು ಸಾವಿರ ರೂಪಾಯಿಗಳನ್ನು ವೆಚ್ಚಮಾಡುತ್ತಿದ್ದೆ. ಆದರೆ ಏನು ಮಾಡಲಿ? ಇವಳ ಹೊರತು ಇನ್ನೂ ನಾಲ್ಕು ಮಂದಿ ಹೆಣ್ಣು ಮಕ್ಕಳು ನನ್ನ ರಾಶಿಯ ಮೇಲೆ ಕೂತಿರುವರು. ಕಾರಣ ಹೇಗಾದರು ಮಾಡಿ ನಮ್ಮ ಮೇಲೆ ಅನುಗ್ರಹ ಮಾಡಿರಿ.” ಎಂದು ನುಡಿದರು.

ಜಾನ—" ಇನ್ನೂ ನಾಲ್ಕುಮಂದಿ ರಾಶಿಯ ಮೇಲೆ ಇರುವರಂತೆ! ಅದರ ಉಪಕಾರವು ನಮಗೇನು? ಅಪ್ಪಯ್ಯಾ ಏನು ಕಠಿಣವಿದು? ಮಾಡಿದಂತೆ ಉಣ್ಣಬೇಕು!"

ರಘು—" ಹೌದು. ನೀನು ಅನ್ನುವದು ತೀರ ನಿಜವು. ಶ್ರೀನಿವಾಸರಾಯರೇ, ಸುಮ್ಮನೆ ಗಾಳೀ-ಗುದ್ದಿ, ಕೈನೋಯಿಸಿಕೊಳ್ಳುವದರಲ್ಲಿ ತಾತ್ಪರ್ಯವೇನು? ನಾಲ್ಕು ಸಾವಿರ ರೂಪಾಯಿ ವರದಕ್ಷಿಣೆಯನ್ನು ಕೊಡುವ ಯೋಗ್ಯತೆಯಿಲ್ಲದಿದ್ದರೆ, ಇಲ್ಲಿ ಕೂಡುವದಾದರು ಯಾತಕ್ಕೆ?"

ಶ್ರೀನಿ—" ರಘುನಾಥರಾಯರೇ, ನನ್ನ [illegible]ಗಳನ್ನು ನೋಡಿರಿ. ಕಾಲೇಜದೊಳಗಿನ ಈ ನಿಮ್ಮ ಗೆಳೆಯ[illegible] ನನ್ನ ಮಗಳ ರೂಪಲಾವಣ್ಯಗಳನ್ನೂ ಸದ್ಗುಣ-ಶಿಕ್ಷಣಗಳನ್ನೂ ಪರೀಕ್ಷಿಸಿರಿ. ಬರಿಯ ಹಣದ ಕಡೆಗೇ ಲಕ್ಷ್ಯಗೊಟ್ಟು, ಹೀಗೆ ಎಲ್ಲ ರೀತಿಯಿಂದ ನಮ್ಮ ಮೋರೆಯ ಮೇಲೆ ಬಡಿದಂತೆ ಮಾಡಬೇಡಿರಿ."

ಜಾನ—" ಆ ನಿಮ್ಮ ಕುಲ-ಶೀಲಗಳನ್ನೂ ರೂಪ-ಲಾವಣ್ಯಗಳನ್ನೂ [illegible]ಕೊಂಡು ಏನು ಮಾಡತಕ್ಕದ್ದು? ಕುಲ-ಶೀಲ-ರೂಪಗಳುಳ್ಳವರಿಗೆ ಮಾತ್ರ ಮಕ್ಕಳಾಗುತ್ತಾರೆ. ಕುಲ-ಹೀನರಿಗೂ ಕುರೂಪಿಗಳಿಗೂ ಮಕ್ಕಳಾಗುವದಿಲ್ಲೇನು? ಸುಮ್ಮನೆ ತಮ್ಮ ಬಾಯಿಂದ ತಾವೇ ಆತ್ಮಸ್ತುತಿಯನ್ನು ಮಾಡಿಕೊಂಡರೇನಾಯಿತು?"

ವಾಚಕರೇ, ಜಾನಕಿಬಾಯಿಯವರ ಈ ಬಗೆಯ ಮರ್ಮಭೇದಕವಾದ ಮಾತುಗಳು ಶ್ರೀನಿವಾಸರಾಯರ ಎದೆಯನ್ನು ಶೀಳಿದವು. ಆಗ ಅವರು ಸಂತಾಪಗೊಂಡು, ಅಲ್ಲಿ ಒಂದು ಅರಗಳಿಗೆ ಸಹ ನಿಲ್ಲದೆ, ನಿರಾಶೆಯುಳ್ಳವರಾಗಿ ಒಮ್ಮೆಲೆ ತಮ್ಮ ಮನೆಗೆ ಹೊರಟು ಹೋದರು

---

## ೨ನೆಯ ಪ್ರಕರಣ.



### ದೃಢ-ನಿಶ್ಚಯ.

ಪುಣ್ಯಾಪಟ್ಟಣದೊಳಗಿನ 'ಫರ್ಗ್ಯೂಸನ್' ಎಂಬ ಕಾಲೇಜದಲ್ಲಿ ಕಮಲಾಕಾಂತ ಮತ್ತು ಶ್ಯಾಮಸುಂದರ ಎಂಬ ಇಬ್ಬರು ವಿದ್ಯಾರ್ಥಿಗಳು ಸೀನಿಯರ ಬಿ. ಎ. ಪರೀಕ್ಷೆಯ ಅಭ್ಯಾಸವನ್ನು ಮಾಡುತ್ತಿದ್ದರು. ಅವರು ಕಾಲೇಜದೊಳಗಿನ ಕೋಣೆಗಳಲ್ಲಿಯೇ ಇರುತ್ತಿದ್ದರು. ಅವರ ಅಂತಃಕರಣಗಳು, ಅವನತಿಯನ್ನು ಹೊಂದುತ್ತಿರುವ ನಮ್ಮ ಸಮಾಜದ ವಿಷಯವಾಗಿ ಯಾವಾಗಲು ತಿಳಿಣಿಸುತ್ತಿದ್ದವು; ಅಂತೇ ಅವರು ತಮಗೆ ಸಿಕ್ಕ ವೇಳೆಯಲ್ಲಿ 'ನಮ್ಮ ಸಮಾಜದ ಸುಧಾರಣೆ' ಎಂಬ ವಿಷಯದ ಮೇಲೆ ಚರ್ಚೆಯನ್ನು ಮಾಡುತ್ತಿದ್ದರು. ಈ ಹೊತ್ತು ಶಾಮಸುಂದರನ ಕೋಣೆಯಲ್ಲಿ 'ವರದಕ್ಷಿಣೆಯ ವಿಚಾರ' ಎಂಬ ವಿಷಯದ ಮೇಲೆ ಚರ್ಚೆಯು ನಡೆದಿತ್ತು. ಈಗ ಮಾತಾಡುವ ಸರತಿಯು ಶ್ಯಾಮಸುಂದರರ ಕಡೆಗೆ ಬಂದಿತ್ತು.

ಶ್ಯಾಮ- "ಕಮಲಾಕಾಂತಾ, ಸುಮ್ಮನಾಗು. ಬರಿಯ ಮಾತುಗಳಿಂದ ಪ್ರಯೋಜನವಿಲ್ಲ. ಎರಡನೆಯವರಿಗೆ ಹೆಸರಿಡಲಿಕ್ಕೆ ಪ್ರತಿಯೊಬ್ಬರಿಗೆ ಬರುತ್ತದೆ; ಆದರೆ ತಮಗೆ ಆ ಪ್ರಸಂಗ ಬಂತೆಂದರೆ, ಈ ವಾಕ್ಪಾಂಡಿತ್ಯವೆಲ್ಲ ಎಲ್ಲಿ ಹೋಗುತ್ತದೋ ದೇವರಿಗೇ ಗೊತ್ತು! ದೂರವೇಕೆ? ನೀನೇ ಏನೇನು ಮಾಡುತ್ತೀನೋ ಡೋಣ! ವರದಕ್ಷಿಣೆಯನ್ನು ತಕ್ಕೊಳ್ಳುವದಿಲ್ಲೆಂದು ಒಂದೇಸವನೆ ಒಟಗುಟ್ಟುತ್ತಿರುವಿ."

ಕಮ—"ಶ್ಯಾಮಸುಂದರಾ, ಹೌದು ಹೌದು. ನಾನು ಒಂದು ಕಾಸು ಸಹ ವರದಕ್ಷಿಣೆಯನ್ನು ತೆಗೆದುಕೊಳ್ಳದೆ ಮದುವೆಯನ್ನು ಮಾಡಿಕೊಳ್ಳತಕ್ಕವನಿದ್ದೇನೆ ಈ ಮಾತಿಗೆ ನನ್ನ ತಾಯಿತಂದೆಗಳ ಒಪ್ಪಿಗೆಯು ದೊರೆಯಲಿಕ್ಕಿಲ್ಲೆಂಬದು ನನಗೂ ಗೊತ್ತುಂಟು."

ಶ್ಯಾಮ—"ಕಮಲಾಕಾಂತಾ, ನಿನಗೆ ಇನ್ನೂ ಜಗತ್ತಿನ ಅನುಭವ ವಿಲ್ಲ. ನಾಳೆ ನಿನ್ನ ತಂದೆಯವರ ಕಡೆಯಿಂದ 'ಇತ್ತಕಡೆಗೆ ಮದುವೆಯ

ನಿಶ್ಚಯವನ್ನು ಮಾಡಿದ್ದೇವೆ. ಬೇಗನೆ ಹೊರಟು ಬಾ.' ಎಂದು ಪತ್ರ ಬಂದರೆ, ನೀನು ಏನು ಮಾಡುವಿ? ನೀನು ಮಾಡುವದೆಲ್ಲವೂ ನನಗೆ ಗೊತ್ತುಂಟು. ನೀನು ಅಲ್ಲಿಗೆ ಹೋಗುವಿ. ನಿನ್ನ ವಿಚಾರಗಳು ಅಲ್ಲಿ ಯಾರಿಗೂ ಸೇರಲಿಕ್ಕಿಲ್ಲ. ನಿನ್ನ ಅಕ್ಕತಂಗಿ, ತಾಯಿತಂದೆ, ಕಕ್ಕಮಾವ ಮೊದಲಾದ ಹಿರಿಕಿರಿಯರು ನಿನ್ನ ಮೇಲೆ ಮಾತಿನ ಮಳೆಗರೆದು, ನಿನ್ನ ಅಂಬೋಣವನ್ನು ಅಲ್ಲಗಳೆಯುವರು. ಅವರ ಮುಂದೆ ನಿನ್ನದು ಏನೂ ನಡೆಯಲಿಕ್ಕಿಲ್ಲ. ಹೀಗಾಯಿತೆಂದರೆ, ಅವರು ನಿನಗೆ ತಮ್ಮ ಮನಸ್ಸಿನಲ್ಲಿ ದ್ದಂತೆ ಮಾಡಲಿಕ್ಕೆ ಹಚ್ಚುವರು ಸಾರಾಂಶ, ನೀನಾದರು ಅನ್ಯರು ಹಿಡಿದ ಹಾದಿಯನ್ನೇ ಹಿಡಿಯುವಿ. ಕಮುಲಾಕಾಂತಾ, ಏನು ಹೇಳಲಿ? ಇದುವರೆಗೆ ನಿನ್ನಂಥ ಕಮಲ-ನಿಶ್ಚಯಿಗಳ ನಿಶ್ಚಯವು ಸದ್ದಿಲ್ಲದೆ ಓಡಿ ಹೋಗಿರುವದು. ನಾವು ಕಾಲೇಜದಲ್ಲಿರುವವರೆಗೆ ಮಾತ್ರ ದೇಶಹಿತಕ್ಕಾಗಿ ಹೆಣಗುವೆವು; ಸಮಾಜಸುಧಾರಣೆಯನ್ನು ಮಾಡುವೆವು; ಅದನ್ನು ಮಾಡುವೆವು; ಇದನ್ನು ಮಾಡುವೆವು; ಎಂದು ಹರಟೆಯನ್ನು ಕೊಚ್ಚು ವೆವು; ಆದರೆ ಒಮ್ಮೆ ಇಲ್ಲಿಂದ ಹೊರಬಿದ್ದು ಪ್ರಪಂಚಕ್ಕೊಳಗಾದೆವೆಂದರೆ ನಮ್ಮ ಈ ವಿಚಾರಗಳೆಲ್ಲ ಅಡಗಿಹೋಗುವವು ಬಳಿಕ ನಾವು ನಮ್ಮ ನಮ್ಮ ವ್ಯವಸಾಯಗಳಲ್ಲಿ ಮಗ್ನರಾಗಿ, ಪರಂಪರಾಗತ ರೂಢಿಯನ್ನೇ ಹಿಂಬಾಲಿಸುವೆವು. ಆ ಮೇಲೆ ಅದರಲ್ಲಿ ಇಷ್ಟವು ಯಾವದು, ಅನಿಷ್ಟವು ಯಾವದು ಇವುಗಳ ಕಡೆಗೆ ನಮ್ಮ ಲಕ್ಷವೇ ಹೋಗುವದಿಲ್ಲ. ಹಿಡಿದ ಮಾತನ್ನು ಕೊನೆಗಾಣಿಸಲಿಕ್ಕೆ ನಾವೇನು ಭೀಷ್ಮಾಚಾರ್ಯರಲ್ಲ, ಶಂಕರಾ ಚಾರ್ಯರಲ್ಲ!"

ಕಮ—"ಶ್ಯಾಮಸುಂದರಾ, ನೀನನ್ನುವದು ನಿಜವು; ಆದರೆ ವಿವಾಹದಂಥ ಮಹತ್ವದ ಕೆಲಸದಲ್ಲಾದರು ಹಿರಿಯರು ತಿಳುವಳಿಕೆ ಯುಳ್ಳ ಮಗನ ಅಭಿಪ್ರಾಯವನ್ನು ಕೇಳಿಕೊಳ್ಳಬಾರದೋ? ಮಗನು ಪ್ರಬುದ್ಧನಿದ್ದು, ಮದುವೆಯಂಥ ಮಹತ್ವದ ಕೆಲಸದಲ್ಲಿ ಆತನನ್ನು ಕೇಳ ದಿರುವದು, ಅವನ ಮತವನ್ನು ಅನಾದರಿಸುವದು; ಮತ್ತು ಕೇವಲ ಆ ಬಿಳಿ ಬೆಳ್ಳಿಯ ಚೂರುಗಳ—ರೂಪಾಯಿಗಳ ಲೋಭಕ್ಕಾಗಿ ತಮ್ಮ ಮನಸ್ಸಿನಲ್ಲಿದ್ದಂತೆ ಬೇಕಾದಂಥ ಶರೀರಸಂಬಂಧವನ್ನು ಕೂಡಿಸುವದು

ಇವೇ ಹಿರಿಯರ ಕರ್ತವ್ಯಗಳೋ? ಪಿತ್ರಾಜ್ಞೆಗೆ ತಲೆಬಾಗಿಸಿ ಜನ್ಮದ ಹಾನಿಯನ್ನು ಯಾರು ಮಾಡಿಕೊಳ್ಳುವರು? ತಿಳಿದೂ ತಿಳಿದು ದುಃಖದ ಮೊಟ್ಟೆಯನ್ನು ಸೆರಗಿನಲ್ಲಿ ಯಾರು ಕಟ್ಟಿಕೊಳ್ಳುವರು? ಬರಿಯ ವರ ದಕ್ಷಿಣೆಯ ಕಡೆಗೇ ಲಕ್ಷ್ಯಗೊಟ್ಟು, ತಂದೆಯವರು ನನ್ನ ಒಪ್ಪಿಗೆಯಿಲ್ಲದೆ ನನ್ನ ವಿವಾಹಸಂಬಂಧವನ್ನು ಕೂಡಿಸಿದರೆ, ನಾನು ಅವರಿಗೆ ಲಗ್ನವನ್ನೇ ಮಾಡಿಕೊಳ್ಳುವದಿಲ್ಲೆಂದು ಖಂಡಿತವಾಗಿ ಹೇಳುವೆನು ಇದರಿಂದ ಅವರು ಸಿಟ್ಟಾದರೂ ಚಿಂತೆಯಿಲ್ಲ. ಕನಿಷ್ಟ, ವಿವಾಹದಂಥ ಕೆಲಸದಲ್ಲಾ ದರೂ ನಾವು ನಮ್ಮ ನಿಶ್ಚಯವನ್ನು ಸ್ಥಿರವಾಗಿ ಇಟ್ಟುಕೊಳ್ಳಲಿಕ್ಕೆಬೇಕು. ಶ್ಯಾಮಸುಂದರಾ! ಇದರಿಂದ ತಂದೆಯವರ ಅವಜ್ಞೆಯಾದರೂ ಚಿಂತೆ ಯಿಲ್ಲ. ನಾನು ಮಾತ್ರ ನನ್ನ ನಿಶ್ಚಯವನ್ನು ಎಂದಿಗೂ ಬಿಡಲಿಕ್ಕಿಲ್ಲ.''

ಶ್ಯಾಮ—ಕಮಲಾಕಾಂತಾ, ನೀನನ್ನುವದು ನಿಜವು. ಆದರೆ ಯಾವದೊಂದು ಮಾತಿಗೆ ಮರ್ಯಾದೆಯುಂಟು. ಒಮ್ಮೆಲೆ 'ನಾನೇ ಮಾಡಿದ್ದು ಪೂರ್ವದಿಕ್ಕು' ಎಂದು ಅನ್ನುವದೂ ಸರಿಯಲ್ಲ. ಮತ್ತು ಒಂದು ಗಲ್ಲದ ಮೇಲೆ ಹೊಡೆದರೆ, ಮತ್ತೊಂದನ್ನು ಮುಂದೆ ಮಾಡು ವದೂ ಸರಿಯಲ್ಲ! ಯಾವದೊಂದು ಕೆಲಸವನ್ನು ಸಾರಾಸಾರ ವಿಚಾರ ದಿಂದಲೇ ಮಾಡಲಿಕ್ಕೆಬೇಕು. ಸದ್ಯಕ್ಕೆ ಪ್ರತಿಯೊಬ್ಬರು ತಮ್ಮ ತಮ್ಮ ಮನಬಂದಂತೆ ನಡೆಯಹತ್ತಿದ್ದಾರೆ. 'ಸಾಕು. ನಿನ್ನ ಮತವೇ ಬೇರೆ ನನ್ನ ಮತವೇ ಬೇರೆ. ನಿನಗೆ ತಿಳಿದಂತೆ ನೀನು ನಡೆ. ನನಗೆ ಯೋಗ್ಯಕಂಡ ಹಾದಿಯಿಂದ ನಾನು ಹೋಗುತ್ತೇನೆ. ನಿನ್ನ ವಿಚಾರಗಳು ನನಗೆ ಒಪ್ಪಿಗೆ ಯಿಲ್ಲ' ಎಂದು ಒಬ್ಬರ ವಿಚಾರಗಳನ್ನು ಮತ್ತೊಬ್ಬರು ಅಲ್ಲಿಗಳೆಯು ತ್ತಿರುವರು; ಆದರೆ ತಮ್ಮ ಮತದಲ್ಲಿ ತಪ್ಪಿರುವದೇನು? ಸತ್ಯಾಂಶವು ಎಷ್ಟರಮಟ್ಟಿಗೆ ಅದೆ; ಅದರಂತೆ ತಮ್ಮ ವಿರುದ್ಧ ಬಣದವರ ಮಾತಿನಲ್ಲಿ ಗ್ರಾಹ್ಯಾಂಶವೆಷ್ಟು ತ್ಯಾಜ್ಯಾಂಶವೆಷ್ಟದೆ ಎಂಬದರ ವಿಚಾರವನ್ನೇ ಮಾಡು ವದಿಲ್ಲ. ಕಾಲೇಜದೊಳಗಿನ ವಿದ್ಯಾರ್ಥಿಗಳಂತೂ ತಮ್ಮ ವೃದ್ಧ ತಾಯಿ ತಂದೆಗಳ ವಿಷಯವಾಗಿ ಮಾತಾಡಹತ್ತಿದರೆಂದರೆ, ಅವರ ಮೈಯಲ್ಲಿ ಎಚ್ಚರವೇ ಉಳಿಯುವದಿಲ್ಲ. ಅವರು ಬಾಯಿಗೆ ಬಂದ ಹಾಗೆ ಬೊಗಳ ಹತ್ತುತ್ತಾರೆ. ದೂರವೇಕೆ? ನಿನ್ನ ಉದಾಹರಣೆಯನ್ನೇ ತಕ್ಕೊಳ್ಳುವಾ.

ನೀನು ಈಗ ನುಡಿದದ್ದೆಲ್ಲ ನಿಜವಿದ್ದರೂ, ಇದೇ ಅಭಿಪ್ರಾಯವನ್ನು ನಮ್ಮ-ಭಾಷೆಯಿಂದ ವ್ಯಕ್ತಮಾಡಲಿಕ್ಕೆ ಬರುತ್ತಿದ್ದಿಲ್ಲವೋ? ನಾವು ನಮ್ಮ ವಿಚಾರಗಳನ್ನು ಸಾಮೋಪಚಾರದಿಂದ ಹಿರಿಯರ ಮುಂದಿಟ್ಟರೆ ಅವರು ಅವುಗಳನ್ನು ವಿಚಾರಿಸಲಿಕ್ಕಿಲ್ಲವೇ? ಒಂದುವೇಳೆ ಅವರು ವಿಚಾರಿಸಲಿಕ್ಕಿಲ್ಲೆಂದು ತಿಳಿಯೋಣ. ಇದರಲ್ಲಿ ಅವರದೇನು ತಪ್ಪು? ನದಿಯ ಓಘವನ್ನು ತಿರುಗಿಸುವದು ಬಿಗಿಯಾದಂತೆ ಒಮ್ಮೆ ಸ್ಥಿರವಾದ ವಿಚಾರಗಳ ಅಂದರೆ ರೂಢಿಯ ಓಘವನ್ನು ತಿರುಗಿಸುವ ಕೆಲಸವಾದರೂ ಬಿಗಿಯಾದದ್ದಿರುತ್ತದೆ. ಇಂಥ ಕಾರ್ಯಗಳು ಒಮ್ಮೆಲೆ ಎಂದೂ ಆಗಲಾರವು ಕಾರಣ ಅವುಗಳನ್ನು ಮೆಲ್ಲ ಮೆಲ್ಲನೆ ಸಾಧಿಸಿಕೊಳ್ಳಲಿಕ್ಕೆಬೇಕು. ಎಳೆಗಿಡವು ಮಣಿಸಿದತ್ತ ಮಣಿಯುತ್ತದೆ; ಆದರೆ ಅದೇ ಬಲಿಯುತೆಂದರೆ ಈ ಕೆಲಸವು ಅಶಕ್ಯವಾಗುತ್ತದೆ ಕಾರಣ ಮನುಷ್ಯರ ವಿಚಾರಗಳು ಬಲಿಯುವ ಪೂರ್ವದಲ್ಲಿಯೇ ನಾವು ಅವುಗಳಿಗೆ ಬೇಕಾದ ಆಕಾರವನ್ನು ಕೊಟ್ಟು, ನಮಗೆ ಬೇಕಾದ ದಿಕ್ಕಿಗೆ ಅವುಗಳ ಓಘವನ್ನು ತಿರುಗಿಸಿಕೊಳ್ಳಬೇಕು. ಸುಧಾರಣೆಯನ್ನು ಮಾಡಲಿಚ್ಛಿಸುವ ನಮ್ಮಂಥ ಉದ್ಯೋಗಿಗಳು ವೃದ್ಧರ ಬಾಯಿಗೆ ಹತ್ತಬಾರದು, ಅವರಿಗೆ ಉಪದೇಶ ಮಾಡುವ ಗೋಜಿಗೆ ಹೋಗಬಾರದು; ಅವರು ತಮ್ಮ ಮತವನ್ನು ಎಂದಿಗೂ ಬಿಡಲಾರರು; ಇಷ್ಟೇ ಅಲ್ಲ, ಈಗಿನ ಹುಡುಗರೇ ಇಂಥವರು ಎಂದು ನಮ್ಮನ್ನೇ ಹಳಿದು, ಮನೆಯಿಂದ ಹೊರಗೆ ಹಾಕಲಿಕ್ಕೆ ಅವರು ಎಂದೂ ಹಿಂಜರಿಯಲಾರರು. ಕಾರಣ ಕಮಲಾಕಾಂತಾ, ನಿನಗೆ ಮತ್ತೆ ಮತ್ತೆ ಹೇಳುವದೇನಂದರೆ.—ನೀನು ನಿನ್ನ ತಂದೆಯವರಿಗೆ ಬರೆಯತಕ್ಕ ಪತ್ರಗಳಲ್ಲಿ ಹೆಚ್ಚಿಗೇನೂ ಬರೆಯುತ್ತಿರಬೇಡ. ಬರೆಯತಕ್ಕದ್ದನ್ನು ಸರಳ ಶಬ್ದಗಳಿಂದಲೂ ಸವಿಕಟ್ಟಾಗಿಯೂ ಬರೆಯುತ್ತ ಹೋಗು."

ಕಮ—ಏಕೆ ಶ್ಯಾಮಸುಂದರಾ, ಈ ಹೊತ್ತು ಜ್ಞಾನೋಪದೇಶವು ವಿಶೇಷವಾಗಿ ನಡೆದಿರುವದು?

ಶಾಮ—'ಕಮಲಕಾಂತಾ, ನನ್ನ ಜ್ಞಾನೋಪದೇಶವು ಒತ್ತಟ್ಟಿಗಿರಲಿ. ನೀನು, ಒಂದು ಕಾಸುಸಹ ವರದಕ್ಷಿಣೆಯನ್ನು ತಕ್ಕೊಳ್ಳದೆ, ಮದುವೆಯನ್ನು ಮಾಡಿಕೊಳ್ಳುವೆನೆಂದು ಪ್ರತಿಜ್ಞೆಯನ್ನು ಮಾಡುವಿಯಾ?"

ಕಮ—“ಹೌದು ಹೌದು; ಮಾಡುವೆನು. ಶ್ಯಾಮಸುಂದರಾ; ನಾನು ಮದುವೆಯನ್ನು ಮಾಡಿಕೊಂಡರೆ, ವರದಕ್ಷಿಣೆಯನ್ನು ತಕ್ಕೊಳ್ಳದೆ, ಅನವಶ್ಯಕ ವೆಚ್ಚವನ್ನು ಮಾಡದೆ, ತೀರ ಸಾಮಾನ್ಯ ರೀತಿಯಿಂದ ಮಾಡಿಕೊಳ್ಳುವೆನೆಂದು, ನಿನಗೆ ಇನ್ನೊಮ್ಮೆ ಎದೆಗೆ ಕೈ ಹಚ್ಚಿಕೊಂಡು ಹೇಳುತ್ತೇನೆ. ಉಪನಯನ ವಿವಾಹ ಮೊದಲಾದ ಕಾರ್ಯಗಳಲ್ಲಾಗುವ ಅನವಶ್ಯಕ ವೆಚ್ಚವು ನನಗೆ ತೀರ ಸೇರಿಕೆಯಿಲ್ಲ! ನಮ್ಮ ಜಾತಿಯ ಎಷ್ಟೋ ಭಾಂಧವರು ಹೊಟ್ಟೆಗಿಲ್ಲದೆ ಒಪ್ಪೊತ್ತು ತುಸು ಕಾರ-ರೊಟ್ಟಿಗಳನ್ನು ತಿಂದು ಕಾಲವನ್ನು ಕಳೆಯುತ್ತಿರುವರು! ಆದರಲ್ಲಿಯೂ ಪ್ಲೇಗ, ಮಾರೀಬೇನೆ ಮೊದಲಾದ ಆಪತ್ತುಗಳಿಂದ ಸಾವಿರಾರು ಕುಟುಂಬಗಳು ಅನಾಥವಾಗಿ ದಾರಿಮೊರೆತ ಕಡೆಗೆ ಹೋಗಹತ್ತಿರುವವು! ಸದ್ಯಕ್ಕೆ ಈ ಬಗೆಯ ವಿಷಮಾವಸ್ಥೆಯು ನಮ್ಮ ದೇಶಕ್ಕೆ ಪ್ರಾಪ್ತವಾಗಿರಲು, ನಾವು ಉಂಡಿ-ಕರಿಗಡಬು-ಕಲಸನ್ನಗಳನ್ನು ತಿನ್ನುತ್ತ, ಗಾಯನ-ನರ್ತನಗಳಲ್ಲಿ ಮುಳುಗಿ ಹೋಗುವದು ಸರಿಯೇ? ಮುಂಚೆ, ಮದುವೆ ಮೊದಲಾದ ಸಮಾರಂಭಗಳಲ್ಲಿ ಅನವಶ್ಯಕವಾಗಿ ವೆಚ್ಚಾಗುವ ಹಣದಿಂದ ಒಂದು ಫಂಡ (ಧನ-ಸಂಚಯ) ವನ್ನು ಕೂಡಿಸಿ, ಅದರಿಂದ ಬೇಕಾದಂಥ ಲಾಭವನ್ನು ಮಾಡಿಕೊಳ್ಳಬಹುದು. ಮನಸ್ಸಿನಲ್ಲಿ ತಂದರೆ ಯಾವ ಕೆಲಸವಾಗಲಿಕ್ಕಿಲ್ಲ? ಉಪಾಯಾಂತರದಿಂದ ವರದಕ್ಷಿಣೆಯ ಹಣವೆಲ್ಲ ಈ ಫಂಡಿಗೆ ದೊರೆತರೆ, ಎಂಥ ಮಹತ್ವದ ಕಾರ್ಯವಾಗುವದೆಂದು ಹೇಳಲಿ? ಆದರೆ ಈ ಬಗೆಯ ಕಾರ್ಯದ ಮರ್ಮವು ಮೊದಲು ತಿಳಿಯಲಿಕ್ಕೆ ಬೇಕು. ಅದು ಅಂತಃಕರಣಕ್ಕೆ ಹೊಳೆಯಲಿಕ್ಕೆ ಬೇಕು! ಹೀಗಾದ ಹೊರತು ನಿರ್ವಾಹವೇ ಇಲ್ಲ. ಇಂಥ ಸಮಾಜವನ್ನು ಸ್ಥಾಪಿಸಬೇಕಾದರೆ, ಮೊದಲು ನಮ್ಮಂಥ ಕೆಲವು ಸ್ವಾರ್ಥತ್ಯಾಗಿಗಳಾದ ತರುಣರು ನಡಕಟ್ಟಿ ನಿಲ್ಲಲಿಕ್ಕೆಬೇಕು!”

ಶ್ಯಾಮ—“ಕಮಲಾಕಾಂತಾ, ಮಾತಾಡುವದು ಸುಲಭವು; ಆದರೆ ಅದರಂತೆ ಆಚರಣವನ್ನಿಡುವದು ಬಲು ಬಿಗಿಯಾದದ್ದು! ಶ್ರೀ

ರಾಮದಾಸ ಸ್ವಾಮಿಗಳು ' क्रियेवीण वाचाळता व्यर्थ आहे '' ಕೆಲಸ ಮಾಡದೆ ಬರಿಯ ಬಾಯಿಮಾತುಗಳು ವ್ಯರ್ಥವಾದವುಗಳು ಎಂದು ಹೇಳಿರುವರು. ಪ್ರತ್ಯಕ್ಷ ಕೆಲಸವನ್ನು ಮಾಡಹತ್ತಲು, ಅದರೊಳಗಿನ ಸುಖದುಃಖಗಳು ಗೊತ್ತಾಗುತ್ತವೆ. ನೀನು ಇದುವರೆಗೆ ಮಾಡಿದ ವಾಕ್ಪಾಂಡಿತ್ಯದ ಪರಿಣಾಮವು ಸ್ವತಃ ನಿನ್ನ ಮೇಲೆ ಏನಾದರು ಆಗಿರುವದೋ. ಅಥವಾ ಸುಮ್ಮನೆ ಒಟಗುಟ್ಟುವಿಯೋ? ನೀನು ಸ್ವಾರ್ಥಬಿಟ್ಟು ಕೆಲಸವನ್ನು ಮಾಡಲಿಕ್ಕೆ ಸಿದ್ಧನಿರುವಿಯಾ? ನಾವು ಜನರಿಗೆ ಯಾವ ಉಪದೇಶವನ್ನು ಮಾಡಬೇಕೆಂದು ಬಯಸುವೆವೋ, ಅದರಂತೆಯೇ ನಾವು ಮೊದಲು ನಡೆದು, ಹಿಂದುಗಡೆ ಜನರಿಗೆ ಉಪದೇಶಮಾಡಬೇಕಾಗುವದು; ಅಂದರೆ ನಮ್ಮ ಉಪದೇಶದ ಪಡಿಯಚ್ಚು ಜನರ ಅಂತಃಕರಣದ ಮೇಲೆ ಚನ್ನಾಗಿ ಮೂಡುವದು. ಇಲ್ಲದಿದ್ದರೆ ನಮ್ಮ ಮಾತಿನ ಪರಿಣಾಮವೇನೂ ಆಗಲಾರದು ಯಾವನೊಬ್ಬ ಶೆರೆಗುಡಕನು—' ಜನರುಗಳಿರಾ! ಸರಾಯಿಯನ್ನು ಕುಡಿಯಬೇಡಿರಿ. ಅದರಿಂದ ಶರೀರದ ನಾಶವಾಗುತ್ತದೆ; ಸಂಸಾರದ ಸಮಾಪ್ತಿಯಾಗುತ್ತದೆ; ಹಣ-ಗುಣಗಳೂ ಹೋಗಿ, ಮೋರೆಯ ಮೇಲೆ ಹೆಣದ ಕಳೆಯು ಬರುತ್ತದೆ; ನರಾಂಶ ಎಲ್ಲ ರೀತಿಯಿಂದ ಅವನತಿಯಾಗಿ, ಕೊನೆಗೆ ಅಧೋಗತಿಯು ಪ್ರಾಪ್ತವಾಗುತ್ತದೆ, ಎಂದು ಉಪದೇಶಿಸಹತ್ತಿದರೆ, ಅವನ ಈ ಉಪದೇಶವನ್ನು ಯಾರಾದರು ಕಿವಿಯ ಮೇಲೆ ಹಾಕಿಕೊಳ್ಳುವರೋ? ಎಂದೂ ಹಾಕಿಕೊಳ್ಳಲಾರರು, ಇಷ್ಟೇ ಅಲ್ಲ, ಎಲ್ಲವೂ ಗೊತ್ತದೆ. ತಾನು ದಿನಾಲು ತೆರಪಿಲ್ಲದೆ ಸರಾಯಿಯನ್ನು ಕುಡಿಯುತ್ತಿದ್ದು, ನಮಗೆ ಬ್ರಹ್ಮಜ್ಞಾನವನ್ನು ಹೇಳಲಿಕ್ಕೆ ಬಂದಿರುವನು ' ಎಂದು ಅವನನ್ನೇ ಜರೆಯುವರು; ಆದರೆ ಸರಾಯಿಯನ್ನು ಕುಡಿಯದವನೊಬ್ಬನು ಮೇಲೆ ಹೇಳಿದಂತೆ ಉಪದೇಶ ಮಾಡಿದರೆ, ಅದರ ಸುಪರಿಣಾಮವಾಗದೆ ಎಂದಿಗೂ ಇರಲಾರದು. ಅವನ ವಿರುದ್ಧವಾಗಿ ಯಾರೂ ಮಾತಾಡಲಾರರು. ಆತನ ಮತಗಳನ್ನು ಎಲ್ಲರೂ ಆದರಿಸುವರು. ಇದು ಯಾತರ ಪರಿಣಾಮವು? ಆತ್ಮಶುದ್ಧಿಯದಲ್ಲವೇ?

ನಿರ್ಮಲಾಚರಣದ ಉಪಯೋಗವು ಬೇಕಾದ ಕಾರ್ಯದಲ್ಲಾಗುತ್ತದೆ. ನಿರ್ಮಲಾಚರಣವುಳ್ಳ ಮನುಷ್ಯನಿಗೆ ಯಾವ ಅಂಜಿಕೆಯೂ ಇಲ್ಲ. ಕಾರಣ ಕಮಲಾಕಾಂತಾ, ನೀನು ಸಾರ್ವಜನಿಕ ಕಾರ್ಯಗಳನ್ನು ಮಾಡ ಬೇಕೆಂದು ಬಯಸುತ್ತಿದ್ದರೆ, ಮೊದಲು ನಿನ್ನ ಆಚರಣವನ್ನು ಶುದ್ಧವಾಗಿ ಇಟ್ಟುಕೊಳ್ಳು! ಅದರಲ್ಲಿ ಜನರಿಗೆ ಹೆಸರಿಡಲಿಕ್ಕೆ ಬಾರದಂತೆ ತಿದ್ದುಪಡೆ ಯನ್ನು ಮಾಡಿಕೊಳ್ಳು!! ನಮ್ಮಂಥ ಸುಧಾರಣಾಪ್ರಿಯಜನರ ಆಚರಣವು ನಿರ್ಮಲವಾಗಿರಲಿಕ್ಕೆಬೇಕು! ಮನಸ್ಸೆಂಬ ಕನ್ನಡಿಗೆ ಕಲೆಬೀಳುವ ಅಂಜಿಕೆಯೇ ಬಹಳ! ಒಂದು ವೇಳೆ ಕಲೆಬಿದ್ದರೂ, ಅದನ್ನು ಒರಸಿ ತೆಗೆಯಲಿಕ್ಕೆಬೇಕು."

ಕಮ—"ಒಳ್ಳೇದು. ನಾನು ಇಂದಿನಿಂದ ಸಾರ್ವಜನಿಕ ಕೆಲಸ ಗಳನ್ನು ಮಾಡುವ ದೃಢ-ನಿಶ್ಚಯವನ್ನು ಮಾಡುತ್ತೇನೆ."

ಶ್ಯಾಮ—ಕಮಲಾಕಾಂತಾ, ನೆಟ್ಟಗೆ ವಿಚಾರಮಾಡು. ಈ ಸಾರ್ವ ಜನಿಕ ಕೆಲಸಗಳು ಬಹು ಬಿಗಿಯಾದವುಗಳು! ಇವುಗಳ ಹಾದಿಯಲ್ಲಿ ತಗ್ಗು-ದಿನ್ನೆಗಳು, ಮುಳ್ಳು-ಕಂಟಿಗಳು, ಅಪಮಾನ, ದುರಾಗ್ರಹ, ಮತ್ಸರ ಮತ್ತು ಉಪಟಳ ಎಂಬ ಪರ್ವತಗಳು ಇವೇ ಮೊದಲಾದ ಯಾಕೆ? ಈ ಅಡ್ಡ ಮಾತೇಕೆ? ಸಂಕಟಗಳಿರುವವು. ಇವುಗಳ ವಿಚಾರ ವನ್ನು ಚನ್ನಾಗಿ ಮಾಡಿ, ಹಿಂದುಗಡೆ, ಹೆಜ್ಜೆಯನ್ನು ಮುಂದಿಡು. ಒಮ್ಮೆಲೆ ಅವಸರಗೊಳ್ಳಬೇಡ. ಅವಸರದಿಂದ ಮಾಡಿದ ಕಾರ್ಯಗಳು ಎಂದಿಗೂ ಸರಿಯಾಗಲಾರವು! ತನ್ನ ಬಲಾಬಲವನ್ನೂ ಮನೋ-ಧೈರ್ಯವನ್ನೂ ಮೊದಲು ತಿಳಕೊಂಡು, ತಾನು ಕೈಕೊಳ್ಳುವ ಕೆಲಸವು ತನಗೆ ತೂಗುವದೋ ಇಲ್ಲೋ ಎಂಬದನ್ನು ಚನ್ನಾಗಿ ಆಲೋಚಿಸಿ, ಬಳಿಕ ಯಾವದೊಂದು ಕೆಲಸಕ್ಕೆ ಕೈ ಹಾಕುವದು ಉತ್ತಮ ಮಾರ್ಗವು!"

ಕಮ—"ಶ್ಯಾಮಸುಂದರಾ, ನಾನು ಇಷ್ಟು ಹೇಡಿಯೆಂದು ತಿಳಿ ದಿರುವಿಯಾ? ನಿನಗೆ ನನ್ನ ಸ್ವಭಾವದ ಪರೀಕ್ಷೆಯೇ ಆಗಿಲ್ಲ. ನಾನು ಒಮ್ಮೆ ಯಾವದಾದರೊಂದು ಕೆಲಸದ ಬೆನ್ನು ಹತ್ತಿದೆನೆಂದರೆ, ಅದನ್ನು ಪೂರ್ಗೆ ಸದೆ ಎಂದೂ ಬಿಡುವವನಲ್ಲ! ನಾನು ಏನೇನು ಮಾಡುತ್ತೇನೆಂದು

ನಿನಗೆ ತೀವ್ರವೇ ತಿಳಿಯುವದು. ಸುಮ್ಮನೆ ಮಾತಾಡಿ ಫಲವೇನು? ಅದಿರಲಿ; ಮಿತ್ರಾ ನೀನು ನನಗೆ ನನ್ನ ಪ್ರತಿಯೊಂದು ಕೆಲಸದಲ್ಲಿ ನೆರವಾಗುವಿಯಾ? ನನಗೆ ನಿನ್ನಂಥ ಮಿತ್ರನ ಸಹಾಯವು ಅವಶ್ಯವಾಗಿ ಬೇಕಾಗಿರುವದು."

ಶ್ಯಾಮ—"ಭಾಪು; ಕಮಲಾಕಾಂತಾ ಭಾಪು!! ನಿನ್ನ ಯೋಗ್ಯತೆಯನ್ನೂ, ದೃಢ-ನಿಶ್ಚಯವನ್ನೂ, ನಿನ್ನ ಉದಾತ್ತ-ವಿಚಾರಗಳನ್ನೂ ನೋಡಿ, ನನಗೆ ಬಹಳ ಸಮಾಧಾನವಾಯಿತು. ನಾನು ನಿನ್ನನ್ನು ಪರೀಕ್ಷಿಸುವದಕ್ಕಾಗಿಯೇ, ಈಹೊತ್ತು ಈ ವಿಷಯವನ್ನು ತೆಗೆದನು. ಇದುವರೆಗೆ ನಾನು ನಿನ್ನ ನಿಜ-ಸ್ವರೂಪವನ್ನು ಮರೆಮಾಡಿ, ನಿನ್ನನ್ನು ವಂಚಿಸಿದ್ದಕ್ಕಾಗಿ, ನೀನು ನನ್ನನ್ನು ಕ್ಷಮಿಸು ಈಗ ನಾನು ಆಡಿದ ಮಾತುಗಳು ದ್ವಂದ್ವಾರ್ಥದವಿದ್ದವು. ನನ್ನ ಪರೀಕ್ಷೆಯಲ್ಲಿ ನೀನು ಚನ್ನಾಗಿ ತೇರ್ಗಡೆಯನ್ನು ಹೊಂದಿದಿ; ನಿನ್ನ ಪ್ರತಿಯೊಂದು ವಿಚಾರವು ನನಗೆ ಗ್ರಾಹ್ಯವಾಗಿರುವದು. ನಿನಗೆ ನಾನು ನಿನ್ನ ಪ್ರತಿಯೊಂದು ಕೆಲಸದಲ್ಲಿ ನೆರವಾಗುವೆನು ಎಲ್ಲ ಸಾಮಾಜಿಕ ವಿಷಯಗಳ ಸುಧಾರಣೆಯು ಒಮ್ಮೆಲೆ ಆಗಲಾರದು. ಕಾರಣ ಮೊದಲು ನಾವು ವಿವಾಹದಂಥ ಮಹತ್ವದ ವಿಷಯದಲ್ಲಿಯೇ ಶಕ್ಯವಾದಷ್ಟು ಸುಧಾರಣೆಯನ್ನು ಮಾಡಲಿಕ್ಕೆ ಪ್ರಯತ್ನಿಸೋಣ. ಕಮಲಾಕಾಂತಾ, ಇನ್ನು ವಾದವಿವಾದವು ಸಾಕು ಸಂಜೆಯಾಗುತ್ತ ಬಂತು. ಕಾರಣ ಪರ್ವತಿಯ ಕಡೆಗೆ ತಿರುಗಾಡಲಿಕ್ಕೆ ಹೋಗೋಣ ನಡೆ."

ಕಮ—"ಒಳ್ಳೇದು ನಡೆ, ನಾನು ಸಿದ್ಧನಾಗಿಯೇ ಇರುವೆನು. ನೀನು ಕವಚವನ್ನು ಹಾಕಿಕೊಳ್ಳು."

"ಒಳ್ಳೇದು" ಎಂದು ಶಾಮಸುಂದರನು ನುಡಿದು, ಕೋಟು-ಟೊಪ್ಪಿಗೆಗಳನ್ನು ಹಾಕಿಕೊಂಡನು. ಬಳಿಕ ಅವರಿಬ್ಬರು ಊಟದ ಮೇಲ್ವಿಚಾರಕನಿಗೆ, 'ಇಂದು ನಾವು ಸಾಯಂಕಾಲದಲ್ಲಿ ಊಟಕ್ಕೆ ಬರುವದಿಲ್ಲ.' ಎಂಬು ಹೇಳಿ, ಪರ್ವತಿ ಕಡೆಗೆ ತಿರುಗಾಡಲಿಕ್ಕೆ ಹೊರಟು ಹೋದರು.

---

# ೩ನೆಯ ಪ್ರಕರಣ.



## ಸಂವಾದ.

ಈ ಸಂಸಾರದೊಳಗಿನ ಸುಖ-ದುಃಖಗಳ ಮೂಲಸ್ಥಾನವನ್ನು ಗೊತ್ತು ಹಚ್ಚುವದು ಬಹು ಪ್ರಯಾಸದ ಕೆಲಸವು! ಎಷ್ಟೋ ಪ್ರಸಂಗಗಳಲ್ಲಿ ಈ ಕೆಲಸವು ಮನುಷ್ಯನ ಬುದ್ಧಿಗೂ ಅಸಾಧ್ಯವಾಗುತ್ತದೆ. ನಾವು ಯಾವದನ್ನು ದುಃಖದ ಸಾಗರವೆಂದು ತಿಳಿದು, ಬರೇ ಕಲ್ಪನೆಯಿಂದಲೇ ದುಃಖಸಾಗರದಲ್ಲಿ ಮುಳುಗಿ ಒದ್ದಾಡುತ್ತಿರುತ್ತೇವೋ, ಅದೇ, ಪ್ರಸಂಗ ವಿಶೇಷದಲ್ಲಿ ನಮ್ಮನ್ನು ಅನಂತ ಸುಖಸಾಗರದಲ್ಲಿ ಒಯ್ದುಬಿಡುತ್ತದೆ. ಅದರಂತೆ ನಾವು ಯಾವದರಿಂದ ಸದ್ಯಕ್ಕೆ ಸುಖಸಮುದ್ರದಲ್ಲಿ ಆನಂದ ದಿಂದ ತೇಲಾಡುತ್ತಿರುತ್ತೇವೋ, ಅದೇ, ಮತ್ತೊಂದು ಪ್ರಸಂಗದಲ್ಲಿ ನಮ್ಮನ್ನು ಅಪಾರವಾದ ದುಃಖೋದಧಿಯಲ್ಲಿ ಮುಳುಗಿಸಿ ಬಿಡುತ್ತಿದೆ. ಪ್ರತಿಕ್ಷಣದಲ್ಲಿಯೂ, ಪ್ರತಿಯೊಬ್ಬರಿಗೆ ಇದರ ಅನುಭವವು ಬರುತ್ತಿದ್ದರೂ, ಅವರು ಆ ಬಗ್ಗೆ ಏನೂ ವಿಚಾರಮಾಡುವದಿಲ್ಲ. ಇರಲಿ;

ಶ್ರೀನಿವಾಸರಾಯರು ತಮ್ಮ ಮಗಳಾದ ಚಂಚಲೆಯ ಸಲುವಾಗಿ ವರವನ್ನು ಹುಡುಕಿ ಹುಡುಕಿ ಬೇಸತ್ತು, ಒಂದು ದಿವಸ ತಮ್ಮ ಪತ್ನಿಯಾದ ಲಕ್ಷ್ಮೀಬಾಯಿಯನ್ನು ಎದುರಿನಲ್ಲಿ ಕುಳ್ಳಿರಿಸಿಕೊಂಡು— " ಈ ಹುಡುಗೆಯರೂ ಬೇಡ; ಈ ಪ್ರಪಂಚವೂ ಬೇಡ. ನನಗೆ ಸಾಕು ಸಾಕಾಯಿತು. " ಎಂದು ಖಿನ್ನಮನಸ್ಸಿನಿಂದ ನುಡಿದರು.

ಲಕ್ಷ್ಮೀ—ಹುಡುಗೆಯರು ಬೇಡಾಗಲಿಕ್ಕೂ ಇಷ್ಟು ಉದಾಸೀನರಾಗಲಿಕ್ಕೂ ಏನಾಯಿತು ? ಮಕ್ಕಳಿಲ್ಲದವರು ಮಕ್ಕಳ ಸಲುವಾಗಿ ಎಷ್ಟೋ ವ್ರತ-ವೈಕಲ್ಯಗಳನ್ನು ಮಾಡುತ್ತಾರೆ, ಹಲವು ದೇವರಿಗೆ ಹರಕೆಗಳನ್ನು ಹೊರುತ್ತಾರೆ. ನಮಗೆ ದೇವರ ದಯದಿಂದ ಬಂಗಾರದಂಥ ಐವರು ಹೆಣ್ಣುಮಕ್ಕಳಿರುವರು. ಹುಟ್ಟಿದ ಮೇಲೆ " ಇದ್ದವನೂ ಅಳುತ್ತಾನೆ; ಇಲ್ಲದವನೂ ಅಳುತ್ತಾನೆ." ಎಂದು ಅನ್ನುವದೇನೂ ಸುಳ್ಳಲ್ಲ.

ಶ್ರೀನಿ—" ಹೌದು, ಮನೆಯಲ್ಲಿ ಕೂತು ಬಾಯ್ಬಡಕತನವನ್ನು ಮಾಡಲಿಕ್ಕೆ ನಿಮ್ಮದೇನು ಹೋಗುತ್ತದೆ? ತಿರುಗಾಡಿ, ನನ್ನ ಕಾಲ ನರಗಳು ಹರಿಯುವ ಹೊತ್ತು ಬಂತು. ಆಶೆಯಿಂದ ಎಲ್ಲಿಗಾದರು ಹೋಗಬೇಕು, ಅಲ್ಲಿಂದ ಮೋರೆಯ ಮೇಲೆ ಬಡಿಸಿಕೊಂಡವರಂತೆ ನಿರಾಶೆಯಿಂದ ತಿರುಗಿ ಬರಬೇಕು. ಹೋಗು; ನಾಳೆನಿಂದ ನೀನೇ ಮದಿಮಗನನ್ನು ಹುಡುಕಲಿಕ್ಕೆ ಹೋಗು. ಅಂದರೆ ಹೋದ ಹೋದಲ್ಲಾಗುವ ಚಮತ್ಕಾರವಾದರೂ ನಿನ್ನ ಕಣ್ಣಿಗೆ ಬೀಳುವದು. ಮದಿಮಗನ ಮನೆಯವರು ಉದ್ದಾಮತನದಿಂದ ಏನೆಂದರೂ ತಾಳಿಕೊಳ್ಳೋಣ, ಅವರಿಗೆ ಶಿರಗೊಡ್ಡೋಣ, ಅವರನ್ನು ಅಳತೆಯಿಲ್ಲದೆ ಹೊಗಳೋಣ ಮತ್ತು ಅವರ ಕಾಲು ಬೀಳೋಣ ಮೊದಲಾದ ಸಂಗತಿಗಳ ಅನುಭವವಾದರು ಆಗಲಿ. ಹೂ, ನಾಳೆನಿಂದ ಮದಿಮಗನನ್ನು ಹುಡುಕಲಿಕ್ಕೆ ಹೋಗುತ್ತೀಯಾ?"

ಲಕ್ಷ್ಮೀ— ನಾನು ಸ್ವಾಭಾವಿಕವಾಗಿ ಮಾತಾಡಲಿಕ್ಕೆ ಹೋದರೆ ಅದನ್ನು ತಮ್ಮ ಮೈ ಮೇಲೆ ಹಾಕಿಕೊಳ್ಳುವ ಕಾರಣವೇನೂ ಇದ್ದಿದ್ದಿಲ್ಲ. ಹೆಂಗಸರಿಗೆ ಏನೂ ತಿಳಿಯುವದಿಲ್ಲೆಂದು ಅನ್ನುತ್ತೀರಾ? ಎಲ್ಲವೂ ತಿಳಿಯುತ್ತದೆ; ಆದರೆ ತಿಳಿದು ಉಪಯೋಗವೇನು? ಇನ್ನು ಹುಡುಗಿಯನ್ನು ಹೀಗೆಯೇ ಎಷ್ಟು ದಿವಸಗಳವರೆಗೆ ಇಡತಕ್ಕದ್ದು? ಏನೇ ಆಗಲಿ; ಈ ವರ್ಷ ಅವಳ ಮದುವೆಯನ್ನು ಮಾಡಲಿಕ್ಕೇ ಬೇಕು. ನೆರೆ ಹೊರೆಯವರು 'ಹುಡುಗಿಯನ್ನು ಯಾಕೆ ಬೆಳೆಸಿದಿರಿ? ಇನ್ನು ಬಾಯಿಬಿಡುತ್ತ ಕೂತುಕೊಳ್ಳಿ.' ಎಂದು ಮಾತಾಡುತ್ತ, ಬಾರಬಾರಿಗೆ ಮೂಗು ಮುರಿಯುತ್ತ ಒಂದೇಸವನೆ ನಮ್ಮನ್ನು ಹಂಗಿಸುತ್ತಿರುವರು"

ಶ್ರೀನಿ—" ನಾನು ನಮ್ಮ ಹುಡುಗಿಯ ಮದುವೆಯನ್ನು ಮಾಡುವೆನು; ಇಲ್ಲವೆ ಬಿಟ್ಟುಬಿಡುವೆನು. ಅವರಿಗೆ ನಮ್ಮ ಮನೆಯ ಸುದ್ದಿಯು ಯಾತಕ್ಕೆ ಬೇಕು? ಅವರೇನು ನಮಗೆ ಕೊಟ್ಟುಕೊಂಡು ನಡಿಸುತ್ತಾರೆ; ಮಾತುಗಳನ್ನಾಡಲಿಕ್ಕೆ ಅವರದೇನು ಹೋಗುತ್ತದೆ"

ಲಕ್ಷ್ಮೀ—" ಒಳ್ಳೇದು. ಆ ದೇಶಪಾಂಡೆ ರಘುನಾಥರಾಯರಲ್ಲಿ ಕೊಟ್ಟ ನಮ್ಮ ಹಂಚಲೆಯ ಜನ್ಮ-ಟಿಪ್ಪಣಿಯ ವ್ಯವಸ್ಥೆಯು ಏನಾಯಿತು? ಬಹಳವಾದಿ ಅತ್ತಕಡೆಗೆ ಹೋಗಿಯೇ ಬಂದಿರಬಹುದು

ಶ್ರೀನಿ (ಸಿಟ್ಟಿನಿಂದ) ಅಲ್ಲಿಯ ಸಂಗತಿಯನ್ನು ಏನು ನಿನ್ನ ತಲೆ ಹೇಳಲಿ? ಆ ಸ್ಥಳವು ಕೂಡಬಹುದೆಂದು ನನಗೆ ಬಹಳ ಆಶೆಯಿತ್ತು. ಮೂವತ್ತಾರು ಗುಣಗಳೂ ಕೂಡಿದ್ದವು; ಆದರೆ ಮಾಡತಕ್ಕದ್ದೇನು? ಹಣದಕಾಲಲ್ಲಿ-ವರದಕ್ಷಿಣೆಯ ಕಾಲಲ್ಲಿ ಅದು ಕೂಡದಂತಾಗಿದೆ. ಇಲ್ಲದಿದ್ದರೆ ಆ ಸ್ಥಳವು ಬಹಳೇ ಚಲೋ ಇರುವದು. ನಾವು ಬಡವರು. ಅಷ್ಟು ಹಣವನ್ನು ಎಲ್ಲಿಂದ ಕೊಡೋಣ? ನಾನು ಹುಡಿಗೆಯ ಕಲ್ಯಾಣವಾಗುತ್ತದೆಂದು ತಿಳಿದು ನನ್ನ ಯೋಗ್ಯತೆಯನ್ನು ವಿಚಾರ, ವೆಚ್ಚ ಮಾಡಲಿಕ್ಕೆ ಒಪ್ಪಿಕೊಂಡೆ; ಆದರೂ ಅವರ ಹಾರಿಕೆಯು ಇನ್ನೂ ಮುಂದೆ ಹೆಚ್ಚುವದು.

ಲಕ್ಷ್ಮಿ—" ಅವರು ಎಷ್ಟು ವರದಕ್ಷಿಣೆಯನ್ನು ಬೇಡುತ್ತಾರೆ?"

ಶ್ರೀನಿ—" ನಾಲ್ಕು ಸಾವಿರ! ಇಷ್ಟು ವರದಕ್ಷಿಣೆಯನ್ನು ಕೊಡುವ ಯೋಗ್ಯತೆಯು ನಮ್ಮಲ್ಲಿರುವದೋ?"

ಲಕ್ಷ್ಮಿ—" ಛೀ, ಅಲ್ಲದ ಮಾತನ್ನು ಯಾರು ಒಪ್ಪಿಕೊಳ್ಳುವರು?"

ಶ್ರೀನಿ—" ಅದೇಕೆ? ಒಪ್ಪಿ ಆಗಿ ಹೋಗಲಿ! ನಿನ್ನ ಮೈಮೇಲಿನ ಆಭರಣಗಳನ್ನೆಲ್ಲ ಕೊಟ್ಟುಬಿಡು. ಹುಡುಗಿಯ ಕಲ್ಯಾಣವಾದರೂ ಆಗಲಿ. ಈ ಮಾತಾಡು; ಆಭರಣಗಳನ್ನು ಕೊಡುವಿಯಾ?"

ಲಕ್ಷ್ಮಿ—" ಹೀಗೆಂದರೆ ಹೇಗೆ? ಅದೇ ಸ್ಥಳವು ನಮಗೇನು ಹಾಲು ಕೊಡುತ್ತದೋ? ಅದಲ್ಲ ಮತ್ತೊಂದು; ಇನ್ನು ಮೇಲೆ ಹುಡುಗನು ಅಂಥವನು: ಮನೆಯಲ್ಲಿ ತಿನ್ನಲಿಕ್ಕೆ ಕೂಳು ಅದೆಯೋ ಇಲ್ಲೋ? ಆಭರಣಗಳನ್ನು ಇಡುವದೋ ಇಲ್ಲೋ? ಇವೇ ಮೊದಲಾದ ಸಂಗತಿಗಳನ್ನು ವಿಶೇಷವಾಗಿ ವಿಚಾರಿಸುತ್ತ ಕೂಡದೆ, ಸಾಧಾರಣವಾಗಿ ನ್ಯೂನತೆ, ಸಿಕ್ಕ ಸ್ಥಳವನ್ನು ಗೊತ್ತು ಮಾಡಬೇಕು. ಇಷ್ಟರ ಮೇಲೆ ಹುಡುಗಿಯ ದೈವವು! ಅದಕ್ಕೆ ತಾಯಿ-ತಂದೆಗಳೇನು ಮಾಡತಕ್ಕವರು? ಅವಳ ದೈವದಲ್ಲಿದ್ದಂತಾಗುವದು! ಈ ಸ್ಥಳವು ಯೋಗ್ಯವಿಲ್ಲ. ಅದು ಕೂಡುವದಿಲ್ಲ; ಮುಂದಿನ ಸಾರೆ ನೋಡೋಣ. ಹೀಗೆ ಈಗ ಮೂರು ವರ್ಷಗಳಿಂದ ಬಂದೇ ಸರಣಿ ನಡೆದಿರುವದು. ಇನ್ನು ಮೇಲೆ ಹೀಗೆಂದು ನಡೆಯಲಾರದು. ಏನೇ ಆಗಲಿ, ಹೇಗಾದರು ಮಾಡಿ ಈ ವರ್ಷದಲ್ಲಿ ಚಂಚಲೆಯ ಮದುವೆಯನ್ನು ಮಾಡಲಿಕ್ಕೇಬೇಕು!

ಶ್ರೀನಿ—" ಮದುವೆಯನ್ನು ಹೀಗೆ ಅವಸರದಿಂದ ಮಾಡುವದು ಎಷ್ಟುಮಾತ್ರವೂ ಸರಿಯಲ್ಲ ಕಲಿತ ಹೆಂಗಸು ಹೀಗೆ ಎಂದೂ ಮಾತಾಡಲಿಕ್ಕಿಲ್ಲ. ಇದಕ್ಕಾಗಿಯೇ ನಾನು ಹೆಂಗಸರಿಗೆ ವಿದ್ಯೆಗಲಿಸಬೇಕೆಂದು ಅನ್ನುತ್ತೇನೆ. ನೀನು ವಿದ್ಯೆಯನ್ನು ಕಲಿತಿದ್ದರೆ, ನಿನ್ನ ಬಾಯಿಂದಾದರೂ ಇಂಥ ಮಾತುಗಳೇ ಹೊರಡುತ್ತಿದ್ದಿಲ್ಲ. ಲಗ್ನವಾಗದಿದ್ದರೆ ಇಲ್ಲ; ಆಗುವ ಕಾಲಕ್ಕೆ ಆದೀತು. ನಾವೇನು ಸ್ಥಳಗಳನ್ನು ನೋಡಲಿಕ್ಕೆ ಕಡಿಮೆ ಮಾಡಿರುವೆವೋ? ನೂರಾರುಸ್ಥಳಗಳನ್ನುನೋಡಿದೆವು; ಆದರೆ ಒಂದೂ ಕೂಡಿ ಬರಲೊಲ್ಲದು. ಅದಕ್ಕೆ ಮಾಡತಕ್ಕದ್ದೇನು? ಇನ್ನುಮೇಲೆ ಆಗುವದಾಗಲಿ."

ಲಕ್ಷ್ಮೀ—ಆಗತಕ್ಕದ್ದೇನು? ಆಗುವದೆಲ್ಲವು ಕಂಡೇಕಾಣುವದು. ವೈರಿಗಳಮೇಲಾದರೂ ಅಂಥ ವೇಳೆಯು ಬರಬಾರದು. ಒಂದು ವೇಳೆ ಅಂಥ ಪ್ರಸಂಗವು ನಮ್ಮ ಮೇಲೆ ಬಂದರೆ, ಜನರೆಲ್ಲಾಗುವ ನಮ್ಮ ಅಪಹಾಸ್ಯಕ್ಕೆ ಅಂತವೇ ಉಳಿಯಲಿಕ್ಕಿಲ್ಲ!"

ಶ್ರೀನಿ—'ಹರಿಹರಿ! ಏನು ಈ ನಿಮ್ಮ ಹೆಂಗಸರ ತಿಳುವಳಿಕೆಯು! ಯಾವ ಸಂಗತಿಗಳು ಯಾವ ವಯಸ್ಸಿನಲ್ಲಿ ಆಗತಕ್ಕವೋ, ಅವು ಆಯಾ ವಯಸ್ಸಿನಲ್ಲಿ ಆಗೇ ಆಗುವವು; ಅವುಗಳಿಗಾಗಿ ಇಷ್ಟು ಅಂಜುವದೇಕೆ? ಮಗಳು ಮೈನೆರೆದರೆ, ಯಾರದೇನು ತುಡುಗು ಮಾಡಿದಂತಾಯಿತೋ! ಅಥವಾ ಯಾರ ಚಾಡಿಯನ್ನು ಹೇಳಿದಂತಾಯಿತೋ? ಅದಕ್ಕಾಗಿ ಇಷ್ಟು ಚಿಂತೆಯೇಕೆ? ಮದುವೆಯನ್ನು ಪ್ರೌಢ ವಯಸ್ಸಿನಲ್ಲಿ ಮಾಡುವದೇ ಯೋಗ್ಯವು?"

ಲಕ್ಷ್ಮೀ—ಪ್ರೌಢ! ಪ್ರೌಢ! ಹುಡಿಗೆಯರ ಮದುವೆಯನ್ನಾದರೂ ಯಾವ ವರ್ಷದಲ್ಲಿ ಮಾಡಬೇಕನ್ನುತ್ತೀರಿ? ಈಗ ನಮ್ಮ ಚಂಚಲೆಗೆ ಹದಿಮೂರು ತುಂಬಿ ನಾಳಿನ ಚೈತ್ರಕ್ಕೆ ಹದಿನಾಲ್ಕರಲ್ಲಿ ಬೀಳುತ್ತದೆ. ಆದರೂ ಅವಳು ಇನ್ನೂಪ್ರೌಢವಾಗಿಲ್ಲವೋ? ನಿಮ್ಮ ವಿಚಾರವಾದರು ಏನಿರುವದು ?"

ಶ್ರೀನಿ—" ಈ ತಿಳವಳಿಕೆಯ ದೋಷವು ನಿನ್ನ ಕಡೆಗಿಲ್ಲ. ಮೊದಲೇ ಈ ರೂಢಿಯು ನಮ್ಮ ಜನರನ್ನು ಬಿಗಿದು ಬಿಟ್ಟಿರುವದು. ಈ ರೂಢಿಯ ಮುಬ್ಬಿಗೆ ಬಿದ್ದು, ನಿಜವಾದ ಧರ್ಮಶಾಸ್ತ್ರವನ್ನು ಮರೆಯಹತ್ತಿದ್ದಾರೆ. ನೀವು ಸಾವಿತ್ರಿಯ ಕಥೆಯನ್ನು ಕೇಳಿರುವಿಯಷ್ಟೇ? ಅವಳು ಮೂರ್ಲೇ

ಶಾಸ್ತ್ರಗಳಲ್ಲಿ ಪ್ರತಿವನ್ನಾಚರಿಸಿ, ಮದುವೆಯನ್ನು ಮಾಡಿಕೊಂಡಿರುವಳು. ಅಪ್ರತಿಮವಾದ ಸಾವಿತ್ರಿಯ ಚರಿತ್ರವನ್ನು ಇಗ್ಯಾ ಎಷ್ಟೋ ಸ್ತ್ರೀಪುರುಷರು ಪ್ರೇಮದಿಂದಲೂ ಭಕ್ತಿಯಿಂದಲೂ ಓದುತ್ತಿರುವರು. ಅವಳು ಮದುವೆಯಾದಾಗ ಅವಳಿಗೆ ಚನ್ನಾಗಿ ತಿಳಿಯುತ್ತಿತ್ತು- ಆಕೆಯು ತನ್ನ ಗಂಡನನ್ನು ತಾನೇ ಹುಡುಕಿಕೊಂಡಳು. ಇದರ ಮೇಲಿಂದ ಅವಳು ಮದುವೆಯ ಕಾಲಕ್ಕೆ ಎಷ್ಟು ದೊಡ್ಡವಳಿರಬಹುದೆಂಬದನ್ನು ನೀನೇ ತರ್ಕಿಸು. ಇದರಂಥ ಸಾವಿರಾರು ಉದಾಹರಣೆಗಳನ್ನು ಕೊಡಬಹುದು. ನಮ್ಮಲ್ಲಿಯ ಪ್ರಾಚೀನ ಲಗ್ನಪದ್ಧತಿಯು ಇದೇ ಪ್ರಕಾರದ್ದಿತ್ತು. ಈಗ ನಾವು ಅದನ್ನು ಏಕೆ ಸ್ವೀಕರಿಸಬಾರದು? ಅದನ್ನು ಸ್ವೀಕರಿಸಿದಷ್ಟಕ್ಕೇ ಅಧರ್ಮವಾಗುತ್ತದೋ? ನಾವು ನಿಜವಾದ ಧರ್ಮವನ್ನು ಬಿಡಹತ್ತಿದ್ದೇವೆ. ನಾವು ನಮ್ಮ ಪೂರ್ವಕಾಲದ ಲಗ್ನಪದ್ಧತಿಯನ್ನೇ ಬಳಿಕೆಯಲ್ಲಿ ತರಬೇಕಾಗಿದೆ. ಆದ್ದರಿಂದ ನಾವಾದರೂ ಅದೇ ಪದ್ಧತಿಯ ಮಾದರಿಯನ್ನು ಹಾಕಿಕೊಡೋಣ! ಅನಾಯಾಸವಾಗಿ ನಮಗೆ ಈ ಸಂಧಿಯು ಒದಗಿ ಬಂದಿರುವದು. ಕಾರಣ ಹರಿಯುವ ನೀರಿನಲ್ಲಿ ಕೈತೊಳೆದುಕೊಂಡರಾಯಿತು!''

ಇದರ ಮೇಲೆ ಲಕ್ಷ್ಮೀಬಾಯಿಯು ಏನೋ ಮಾತಾಡತಕ್ಕವಳಿದ್ದಳು. ಅಷ್ಟರಲ್ಲಿ ಚಂಚಲೆಯು ಅಲ್ಲಿಗೆ ಬಂದು 'ಚಹಾ ಆಗಿದೆ' ಎಂದು ಹೇಳಲು ಪ್ರಸ್ತುತ ವಿಷಯವು ಅಷ್ಟಕ್ಕೆ ಉಳಿದು, ಆ ಉಭಯತರು ಚಹವನ್ನು ಕುಡಿಯಲಿಕ್ಕೆ ಹೊರಟು ಹೋದರು.

---



# ೫ ನೆಯ ಪ್ರಕರಣ.



## ಪರಿಚಯ

ಪುರಾಣಪ್ರಸಿದ್ಧವಾದ ವಾಯಿಕ್ಷೇತ್ರವು ಬ್ರಾಹ್ಮಣರ ತೌರುಮನೆ ಯಾಗಿರುವದು. ಅಲ್ಲಿಯ ಪ್ರತಿಯೊಬ್ಬ ಬ್ರಾಹ್ಮಣನು ಧರ್ಮನಿರತನೂ ಸುಶೀಲನೂ ಇರತಕ್ಕವನೇ! ಪ್ರಾತಃಸ್ನಾನವನ್ನೂ ಸಂಧ್ಯಾವಂದನೆ ಯನ್ನೂ ಮಾಡದೆ ಇದ್ದ ಬ್ರಾಹ್ಮಣನನ್ನೂ ತುಲಸೀಕಟ್ಟೆ ಆಕಳು ಇವು ಇಲ್ಲದ ಮನೆಗಳನ್ನೂ ಕಾಣುವದು ಅಪರೂಪ! ಇರಲಿ;

ಆಂಗ್ಲರ ಆರಂಭದ ಆಳಿಕೆಯಲ್ಲಿ ಸರಕಾರದ ಸೇವೆಯನ್ನು ಒಮ್ಮನ ಸಿನಿಂದ ಮಾಡಿ ಪೇನಶನ್ ತಕ್ಕೊಂಡ ಎಷ್ಟೋ ಜನರು, ವಾಯಿಕ್ಷೇತ್ರ ದಲ್ಲಿ 'ಹರಿಹರಿ' ಅನ್ನುತ್ತ ನಿಂತುಕೊಂಡಿದ್ದರು. ಅವರಲ್ಲಿಯೇ ದೇಶ ಪಾಂಡೆ ರಘುನಾಥರಾಯರು ಒಬ್ಬರಾಗಿದ್ದರು. ಅವರು ಮುಂಬೈ ಯಿಸಿ ಪ್ಲಾರ್ಸಿಟಿಯ ಪದವೀಧರರಿದ್ದು ಪೇನಶನ್ ತಕ್ಕೊಂಡ ಕಾಲಕ್ಕೆ ಜಿಲ್ಹಾಧಿ ಕಾರಿಯ ಕೆಲಸವನ್ನು ನೋಡುತ್ತಿದ್ದರು. ಅವರು ಕೆಲಸದ ಮೇಲಿದ್ದಾಗ ಹಲವು ಹಂಚಿಕೆಗಳಿಂದ ಬಹಳ ಹಣವನ್ನು ಸಂಪಾದಿಸಿದ್ದರೆಂದು ಜನ ರಲ್ಲಿ ಸುದ್ದಿಯಿತ್ತು. ಕೆಲವರು, ರಘುನಾಥರಾಯರು ಇಂಥವರನ್ನು ಮುಳುಗಿಸಿದರೆಂದೂ, ಇಂಥವನ ಮನೆಯನ್ನು ತೂಳಿಸು ಕುಡಿದರೆಂದೂ ಅನ್ನುತ್ತಿದ್ದರು. ಜನರು ಏನೇ ಮಾತಾಡಲಿ, ಅವರ ಮಾತುಗಳು ಸತ್ಯವೇ ಇರಲಿ, ಅಸತ್ಯವೇ ಇರಲಿ ಅವುಗಳ ಗೋಜು ನಮಗೆ ಬೇಡ ಒಟ್ಟಿನ ಮೇಲೆ ಹೇಳುವದೇನಂದರೆ—ಇಂದಿಗೆ ರಘುನಾಥರಾಯರು ಒಳ್ಳೇ ಧನಿಕ ರೆಂದು ಹೆಸರಾಗಿದ್ದರು. ಅವರ ಮನೆಯಲ್ಲಿ ಅವರು, ಹೆಂಡತಿ ಜಾನಕಿ ಬಾಯಿ, ಕಮಲಾಕಾಂತ ಎಂಬ ಮಗನು ಹೀಗೆ ಮೂವರು ಜನರಿದ್ದರು ಜಾನಕಿಬಾಯಿಯವರಿಗೆ ಮೊದಲು ಮೊದಲು ಮಕ್ಕಳಾಗಲಿಲ್ಲ. ಕಡೆಗೆ ಅವರು ಎಷ್ಟೋ ವ್ರತ-ವೈಕಲ್ಯಗಳನ್ನು ಮಾಡಿ ತಮ್ಮ ವಯಸ್ಸಿನ

ಹದಿನೈದನೆಯ ವರ್ಷದಲ್ಲಿ ಈ ಕಮಲಾಕಾಂತನನ್ನು ಪಡೆದಿದ್ದರು. ಈಗ ಕಮಲಾಕಾಂತನಿಗೆ ಇಪ್ಪತ್ತೊಂದು ವರ್ಷಗಳು ತುಂಬಿದ್ದವು. ಆತನು ಪುಣೆಯ ಫರ್ಗ್ಯೂಸನ್ ಎಂಬ ವಿಶ್ವವಿದ್ಯಾಲಯದೊಳಗಿನ ಬಿ ಎ. ಕ್ಲಾಸಿನಲ್ಲಿದ್ದನೆಂದು ಈ ಮೊದಲೇ ಹೇಳಿಯದೆ. ಅವನು ತನ್ನ ಬಿ. ಎ. ಪರೀಕ್ಷೆಯು ಪಾಸಾದ ಹೊರತು ಮದುವೆಯನ್ನು ಮಾಡಿಕೊಳ್ಳುವದಿಲ್ಲೆಂದು, ತನ್ನ ತಾಯಿ-ತಂದೆಗಳಿಗೆ ಖಂಡಿತವಾಗಿ ಹೇಳಿದ್ದರಿಂದ ಅವರು ಇಲ್ಲಿಯ ತನಕ ಮನಸ್ಸಿನಲ್ಲಿಯೇ ಮುಂಡಿಗೆಯನ್ನು ತಿನ್ನುತ್ತ ಕೂಡಬೇಕಾಯಿತು. ಈ ವರ್ಷ ಕಮಲಾಕಾಂತನು ಬಿ. ಎ. ಪರೀಕ್ಷೆಗೆ ಕೂಡತಕ್ಕವನಿದ್ದನು. ಪರೀಕ್ಷೆಗೆ ಇನ್ನೂ ಎರಡು ತಿಂಗಳು ಅವಕಾಶವಿತ್ತು; ಆದರೂ ಈಗಿನಿಂದಲೇ ರಘುನಾಥರಾಯರೂ ಜಾನಕಿಬಾಯಿಯವರೂ ಹೆಣ್ಣನ್ನು ಶೋಧಿಸುವ ಉದ್ಯೋಗಕ್ಕೆ ಹತ್ತಿದರು. ದಿನಾಲು ಅವರ ಕಡೆಗೆ ಎಷ್ಟೋ ಜನ್ಮ-ಟಿಪ್ಪಣಿಯ ಕಾಗದಗಳು ಬರಹತ್ತಿದವು. ಈ ಟಿಪ್ಪಣಿಯು ಸಗೋತ್ರವಾಗುತ್ತದೆ, ಇದು ಏಕನಾಡಿಯಾಗುತ್ತದೆ; ಇದರ ಗುಣಗಳು ಕಡೆಮೆಬೀಳುತ್ತವೆ. ಎಂದು ವಿಚಾರ ಮಾಡುವದರಲ್ಲಿಯೇ ರಘುನಾಥರಾಯರ ದಿವಸಗಳು ಹೋಗಹತ್ತಿದವು. ಕಮಲಾಕಾಂತನಿಗೆ ಮಾತ್ರ ಈ ಮದುವೆಯ ಸುದ್ದಿ ಸಹ ಇದ್ದಿಲ್ಲ. ಎಷ್ಟೋ ಹುಡಿಗೆಯರ ತಂದೆಗಳಿಗೂ ಪಾಲಕರಿಗೂ ರಘುನಾಥರಾಯರ ಮನೆಗೆ ಎಡತಾಕಿ ಎಡತಾಕಿ ಸಾಕುಬೇಕಾಗಿಹೋಯಿತು. ಎಷ್ಟೋ ಜನರ ಕಾಲೊಳಗಿನ ಜೋಡುಗಳು ಹರಿದವು; ಬೇರೆ ಎಷ್ಟೋ ಜನರ ನಡವು ಬಾಗಿತು: ಒಬ್ಬನೇ ಹುಡುಗ; ಮೇಲಾಗಿ ಸು-ಸ್ವರೂಪಿಯು, ಉಚ್ಚಪ್ರತಿಯ ಶಿಕ್ಷಣವನ್ನು ಹೊಂದಿದವನು! ವಯಸ್ಸೂ ಸಣ್ಣದು! ಮನೆಯಲ್ಲಿ ಮೂರು ನಾಲ್ಕು ಲಕ್ಷದ ಆಸ್ತಿಯು!! ಅಂದಬಳಿಕ ಕೇಳುವದೇನು? ಎಲ್ಲರೂ ಈ ಸ್ಥಳವನ್ನೇ ಏಕೆ ಅಪೇಕ್ಷಿಸಬಾರದು? ಪ್ರತಿಯೊಬ್ಬರಿಗೆ ತಮ್ಮ ಹುಡಿಗೆಯು ಇಂಥಲ್ಲಿ ಬಿದ್ದರೆ, ಅವಳ ದೈವವು ತೆರೆಯಿತೆಂದು ಅನಿಸುವದು ಸ್ವಾಭಾವಿಕವು. ಇದಕ್ಕಾಗಿಯೇ ಪ್ರತಿಯೊಂದು ಹುಡಿಗೆಯ ತಂದೆಯು ಅಥವಾ ಪಾಲಕನು ತನ್ನ ಜೀವಾ ಆಟ್ಟಿಸಿಕೊಂಡು, ಇದೇ ಸ್ಥಳವನ್ನು ದೊರಕಿಸುವದಕ್ಕಾಗಿ ಶ್ರಮಬಡುತ್ತಿದ್ದನು. ಹೀಗೆಯೇ

ಎರಡು ತಿಂಗಳುಗಳವರೆಗೆ ಸಾಗಿತು. ರಘುನಾಥರಾಯರ ಮನಸ್ಸಿಗೆ ಒಂದೂ ಸ್ಥಳವು ಬರಲೊಲ್ಲದು. ಅವರು, ಮೂವತ್ತಾರು ಗುಣಗಳು ಕೂಡಿದ ಸ್ಥಳಗಳನ್ನಾದರೂ ಅಲ್ಲಗಳೆಯಹತ್ತಿದ್ದರು. ಹಣದಾಶೆಯು ಒಮ್ಮೆ ಮನುಷ್ಯನ ಬೆನ್ನುಹತ್ತಿತೆಂದರೆ, ಅವನು ಹೀಗೆಯೇ ಮಾಡತಕ್ಕವನು. ಅವನ ಲೋಭವು ಹೀಗೆಯೇ ಬೆಳೆಯುತ್ತಹೋಗಿ, ಅವನು ಗರ್ವದಲ್ಲಿ ಮುಳುಗಿ, ಕಡೆಗೆ ಒಂದು ದಿವಸ ಅದರಲ್ಲಿಯೇ ಸತ್ತುಹೋಗತಕ್ಕವನು; ಇದರಲ್ಲಿ ಎಳ್ಳಷ್ಟಾದರೂ ಸಂಶಯವಿಲ್ಲ. ರಘುನಾಥರಾಯರೂ ಜಾನಕಿಬಾಯಿಯವರೂ ಇದೇ ಬಗೆಯ ಮೋಹಕ್ಕೆ ಒಳಗಾಗಿದ್ದರು. ವರದಕ್ಷಿಣೆಯ ದೆವ್ವ ಅವರಿಗೆ ಬಡಕೊಂಡಿತ್ತು. ಈಗ ವರದಕ್ಷಿಣೆಯ ಹೊರತು, ಅವರಿಗೆ ಬೇರೆ ಏನೂ ಕಾಣುತ್ತಿದ್ದಿಲ್ಲ. ಅವರಿಗೆ ಸ್ವರ್ಗವು ಮೂರೇ ಬೊಟ್ಟು ಉಳಿದಿತ್ತು. ನಾವೇ ದೈವುಳ್ಳವರು; ನಮ್ಮಷ್ಟು ಧನಿಕರು ಬೇರೆ ಯಾರಿರುವರು? ನಾವು ಮಾಡಿದ್ದೇ ಪೂರ್ವದಿಕ್ಕು; ಹೀಗೆ ಆ ದಾಂಪತ್ಯಕ್ಕೆ ಅನಿಸುತ್ತಿತ್ತು. ನಾಲ್ಕು ಸಾವಿರ ರೂಪಾಯಿ ವರದಕ್ಷಿಣೆಯನ್ನು ತಕ್ಕೊಂಡೇ ಲಗ್ನವನ್ನು ಮಾಡುವೆವೆಂದು, ಅವರು ಪಣವನ್ನು ತೊಟ್ಟಿದ್ದರು. ರಘುನಾಥರಾಯರು ಮತ್ತು ಜಾನಕಿಬಾಯಿ ಇವರ ಪರಿಚಯವು ಸದ್ಯಕ್ಕೆ ಇಷ್ಟೇ ಸಾಕು. ಅವರ ಹೆಚ್ಚಿನ ಸ್ವಭಾವದ ಪರಿಚಯವು ಮುಂದೆ ಕ್ರಮದಿಂದ ತಾನೇ ಆಗುವದು.

ವಾಯೀಕ್ಷೇತ್ರದಲ್ಲಿ ರಘುನಾಥರಾಯರಂತೆ, ಹುಯಿಲಗೋಳ ಶ್ರೀನಿವಾಸರಾಯರೆಂಬ ಒಬ್ಬ ಸುಶೀಲ-ಗೃಹಸ್ಥರು ಇರುತ್ತಿದ್ದರು. ಅವರಿಗೂ ತಿಂಗಳೊಂದಕ್ಕೆ ನೂರು ರೂಪಾಯಿ ಪೇನಶನ್ ದೊರೆಯುತ್ತಿತ್ತು. ರಘುನಾಥರಾಯರೂ ಶ್ರೀನಿವಾಸರಾಯರೂ ವಿಶ್ವವಿದ್ಯಾಲಯದೊಳಗಿನ ಶಿಕ್ಷಣರೂಪಿದೂದ ಪರೆಯನ್ನು ಚೆಲ್ಲಿ ಕರ್ತವ್ಯವೆಂಬ ಹೊಸ ದೇಹವನ್ನು ಧಾರಣಮಾಡಿ, ಜಗತ್ತೆಂಬ ರಂಗ-ಭೂಮಿಯ ಮೇಲೆ ಒಮ್ಮೆಲೆ ಬಂದಿದ್ದರು. ಶ್ರೀನಿವಾಸರಾಯರ ಸ್ವಭಾವವು ಸರಳ! ಅವರಿಗೆ ಎರಡನೆಯವರ ಬಾಲಾಬಡಿಯುವದಾಗಲಿ, ಮುಖಸ್ತುತಿಯಾಗಲಿ ಸೇರುತ್ತಿದ್ದಿಲ್ಲ.

ಅವರು ಕೆಲಸವ ಮೇಲಿರುವಾಗ, ಅವರ ಬಾಯಿಂದ "ನನಗೆ ಸಂಬಳನ್ನು ಹೆಚ್ಚಿಸಿರಿ" ಎಂಬ ಶಬ್ದಗಳು ಒಮ್ಮೆ ಸಹ ಅವರ ಮೇಲಧಿಕಾರಿಗಳ ಮುಂದೆ ಹೊರಡಲಿಲ್ಲ. ರಘುನಾಥರಾಯರ ಸ್ವಭಾವವು ಇದಕ್ಕೆ ತೀರ ವಿಪರೀತವಾದದ್ದು; ಬಹಳ ಜಿಗಟು! ಅವರು ತಮ್ಮ ಸ್ವಾರ್ಥಕ್ಕಾಗಿ ನಿಂದ್ಯಕಾರ್ಯಗಳನ್ನು ಮಾಡಲಿಕ್ಕೆ ಹಿಂದುಮುಂದೆ ನೋಡುತ್ತಿದ್ದಿಲ್ಲ. ಶ್ರೀನಿವಾಸರಾಯರಿಗೆ ಐವರು ಹೆಣ್ಣುಮಕ್ಕಳಿದ್ದರು. ಅವರಲ್ಲಿ ಚಂಚಲೆಯೇ ಹಿರಿಯಳು. ಅವಳಿಗೆ ಈಗ ಹದಿಮೂರು ವರ್ಷಗಳು ತುಂಬಿ ಹದಿನಾಲ್ಕರಲ್ಲಿ ಬಿದ್ದಿತ್ತು. ಈ ಚಂಚಲೆಯ ಲಗ್ನವಿಚಾರಕ್ಕಾಗಿಯೇ ಶ್ರೀನಿವಾಸರಾಯರು ರಘುನಾಥರಾಯರ ಕಡೆಗೆ ಹೋದಾಗ ವರ್ತಿಸಿದ ಸಂಗತಿಯೆಲ್ಲ ಮೊದಲನೆಯ ಪ್ರಕರಣದಲ್ಲಿ ಬಂದಿದೆ. ಅದನ್ನು ವಾಚಕರು ಮರೆತಿರಲಿಕ್ಕಿಲ್ಲ. ಶ್ರೀನಿವಾಸರಾಯರ ಹೆಂಡತಿಯ ಹೆಸರು ಲಕ್ಷ್ಮೀಬಾಯಿ ಮೂರನೆಯ ಪ್ರಕರಣದಲ್ಲಾದ ಈ ದಂಪತಿಗಳ ಸಂವಾದದ ಮೇಲಿಂದ ಅವರ ಸ್ವಭಾವಗಳ ಪರಿಚಯವು ವಾಚಕರಿಗೆ ಆಗೇ ಇರುವದು.

ಇನ್ನು ಶ್ಯಾಮಸುಂದರನ ಗುರುತು ಮಾಡಿಕೊಡುವದಷ್ಟು ಉಳಿಯಿತು. ಶ್ಯಾಮಸುಂದರನು ಕಮಲಾಕಾಂತನ ಗೆಳೆಯನು. ಅವನ ಅಡ್ಡ ಹೆಸರು ಬಲಾಕಿ; ಇರುವ ಊರು ಕರ್ನಾಟಕವು ಅವನಿಗೆ ತಂದೆಯಿಲ್ಲ. ಆತನ ತಂದೆಯು, ತಾನು ಸತ್ತ ಬಳಿಕ ತನ್ನ ಮಗನಿಗೆ ಮುಂದಿಯ ಮೋರೆಯನ್ನು ನೋಡುವ ಹೊತ್ತು ಬರಬಾರದೆಂದು ಯೋಜಿಸಿ, ಮೊದಲೇ ಮನೆ-ಮಾರುಗಳನ್ನೂ ತಕ್ಕಷ್ಟು ಹಣವನ್ನೂ ಗಳಿಸಿಟ್ಟಿದ್ದನು. ಸುಮಾರು ವರುಷಕ್ಕೆ ಆತನ ಹುಟ್ಟುವಳಿಯು ಸಾವಿರ ರೂಪಾಯಿ ಇತ್ತು. ಈಗ ಶ್ಯಾಮಸುಂದರನ ಮನೆಯಲ್ಲಿ ಅವನು, ಅವನ ತಾಯಿ ಹಾಗು ಸುಂದರಿಯೆಂಬವಳೊಬ್ಬ ಅವನ ಹದಿಮೂರು ವರುಷದ ಬಾಲ-ವಿಧವೆಯಾದ ತಂಗಿ ಹೀಗೆ ಒಟ್ಟಿಗೆ ಮೂವರು ಜನರಿದ್ದರು. ಶ್ಯಾಮಸುಂದರನು ಕಮಲಾಕಾಂತನೊಡನೆ ಪುಣೆಯೊಳಗಿನ ಫರ್ಗ್ಯೂಸನ್ ಕಾಲೇಜದಲ್ಲಿ ಕಲಿಯುತ್ತಿದ್ದನೆಂದು ಈ ಮೊದಲೇ ಹೇಳಿಯದೆ. ಆತನ ತಾಯಿ ತಂಗಿಯರು ಕರ್ನಾಟಕದಲ್ಲಿ

ತಮ್ಮ ಸ್ವತ್ತಿನ ಮನೆಯಲ್ಲಿ ಇರುತ್ತಿದ್ದರು. “ಶ್ಯಾಮಾ ನೀನು ಮದುವೆಯನ್ನು ಎಂದು ಮಾಡಿಕೊಳ್ಳುವವನು? ದಿನವೊಂದಕ್ಕೆ ನನ್ನ ಶಕ್ತಿಯು ಕಡಿಮೆಯಾಗಹತ್ತಿತು. ನನ್ನ ಕಣ್ಮುಂದೆ ಒಮ್ಮೆ ಸೊಸೆಯು ಬರಲಿ! ಇಷ್ಟೇ ನನ್ನ ಬಯಕೆಯು ಉಳಿದಿರುವದು. ನೀನಂತೂ ಮದುವೆಯ ವಿಚಾರವನ್ನೆ ಮೂಲೆಗೊತ್ತಿ ಬಿಟ್ಟಿರುವಿ! ಉಪಾಯವಿಲ್ಲ. ನಿನ್ನ ಮನಸಿಗೆ ಬಂದಂತೆ ಮಾಡು. ನೀವು ಈಗಿನ ಹುಡುಗರು. ನಿಮ್ಮ ಮನಸಿಗೆ ಬಂದಂತೆ ನಡೆಯತಕ್ಕವರು. ನಿಮಗೆ ನಮ್ಮಂಥ ಮುದುಕರ ಮಾತುಗಳು ಸೇರಲಾರವು. ಸುಂದರಿಯನ್ನು ಪುಣೆಗೆ ಕರೆದು ಹೋಗಿ ಶಾಲೆಗೆ ಹಾಕುತ್ತೇನೆಂದು ಅನ್ನುವಿ. ಎಲ್ಲವೂ ವಿಚಿತ್ರವೇ! ಶಾಮಾ ನಾನು ಬದುಕಿರುವ ವರೆಗೆ ಮಾತ್ರ ಸುಂದರಿಯನ್ನು ಎಲ್ಲಿಯೂ ಕಳಿಸಿಕೊಡುವದಿಲ್ಲ. ನನ್ನ ಪಶ್ಚಾತ್ ನಿಮ್ಮದೇ ರಾಜ್ಯವಿರುವದು; ಮನ ಬಂದಂತೆ ಕುಣಿಯಿರಿ” ಈ ಬಗೆಯ ತನ್ನ ತಾಯಿಯ ಉದ್ಗಾರಗಳನ್ನು ಕೇಳಿಕೊಳ್ಳುವ ಪ್ರಸಂಗವು ಶಾಮಸುಂದರನಿಗೆ ಮೇಲಿಂದ ಮೇಲೆ ಬರುತ್ತಿತ್ತು. ಆದರೆ ಆತನು ತನ್ನ ತಾಯಿಗೆ ಯಾವ ವಿಷಯದಲ್ಲಿಯೇ ಆಗಲಿ, ಎದುರುತ್ತರವನ್ನು ಕೊಡುತ್ತಿದ್ದಿಲ್ಲ. ಏಕೆಂದರೆ, ‘ತಾಯಿತಂದೆಗಳ ಆಜ್ಞೆಯನ್ನು ಪಾಲಿಸುವದೇ ಮಕ್ಕಳ ಕರ್ತವ್ಯವು’ ಮಕ್ಕಳು ಈ ಕರ್ತವ್ಯವನ್ನು ಸರಿಯಾಗಿ ಜರುಗಿಸಿದರೆ ಮಾತ್ರ ಅವರಿಗೆ ಯಶಸ್ಸುಂಟಾಗುತ್ತದೆಂಬ ತಿಳುವಳಿಕೆಯು ಆತನಲ್ಲಿ ಪೂರ್ಣವಾಗಿ ನೆಲೆಗೊಂಡಿತ್ತು. ಈಗಿನವರಿಗೆ ತಾಯಿಯು ಪ್ರತ್ಯಕ್ಷ ಮಾರಿಯಂತೆ ತೋರುವಳು. ಇರಲಿ. ಶಾಮಸುಂದರನಿಗೆ ಯಾರಾದರು— “ಏನೋ! ನಿನ್ನ ತಾಯಿಯ ವಿಚಾರಗಳು ಬೇರೆ; ನಿನ್ನ ವಿಚಾರಗಳು ಬೇರೆ. ಹೀಗಿದ್ದು ನಿಮ್ಮಿಬ್ಬರ ಹೊಂದಿಕೆಯು ಹೇಗಾಗುತ್ತದೆಂದು” ಕೇಳಿದರೆ, ಅದಕ್ಕೆ ಆತನು—‘ಮಿತ್ರಾ, ಇದರಲ್ಲಿ ಅವಳ ಕಡೆಗೇನೂ ದೋಷವಿಲ್ಲ. ಇದೆಲ್ಲ ಪುರಾತನ ಸಂಸ್ಕಾರಗಳನ್ನು ಪಾಲಿಸುವದರಲ್ಲಿ ಕಳೆದವರಿಗೆ ನಮ್ಮ ಆಧುನಿಕ ಸುಧಾರಣೆಯ ವಿಚಾರಗಳು ಹೇಗೆ ಸೇರಬೇಕು?’ ಎಂದು ಉತ್ತರ ಕೊಡುತ್ತಿದ್ದನು. ವಾಚಕರೇ, ಇತ್ತಿತ್ತಲಾಗಿ ಶಾಮಸುಂದರನ ಮನಸು

ಬಪಲಾಗಹತ್ತಿತ್ತು. ಆತನು ಮದುವೆಯನ್ನು ಮಾಡಿಕೊಂಡು ತನ್ನ ತಾಯಿಯ ಬಯಕೆಯನ್ನು ಪೂರ್ಣ ಮಾಡಬೇಕೆಂದು ಆಲೋಚಿಸಹತ್ತಿದ್ದನು; ಹಾಗು ಈ ತನ್ನ ಜೀವದ ಗೆಳೆಯನಾದ ಕಮಲಾಕಾಂತನಿಗೂ ತಿಳಿಸಿದ್ದನು.

ವಾಚಕರೇ, ಈಗ ನಿಮಗೆ ವಾಯಿ ಕ್ಷೇತ್ರದೊಳಗಿನ ನಮ್ಮ ಎಷ್ಟೋ ಕಥಾಪಾತ್ರಗಳ ಪರಿಚಯವಾಯಿತು. ಇನ್ನು ನಾವೆಲ್ಲರು ಪುಣ್ಯ-ಪತ್ತನಕ್ಕೆ ಹೋಗಿ, ಅಲ್ಲಿಯ ಒಂದು ಬಡಕುಟುಂಬದ ಪರಿಚಯವನ್ನು ಮಾಡಿಕೊಳ್ಳೋಣ ಬನ್ನಿರಿ.

---

## ೫ ನೆಯ ಪ್ರಕರಣ.



### ಬಡಕುಟುಂಬ.

ಐತಿಹ್ಯ-ದೃಷ್ಟಿಯಿಂದ ಪ್ರಸಿದ್ಧವಾದ ಪಟ್ಟಣಗಳಲ್ಲಿ ಪುಣೆ ಪಟ್ಟಣವಾದರೂ ಒಂದಾಗಿದೆ. ಅಲ್ಲಿಯ ಸದಾಸಿವ ಎಂಬ ಪೇಟೆಯಲ್ಲಿ ಗೋವಿಂದರಾಯರೆಂಬ ಒಬ್ಬ ಸದ್ಗೃಹಸ್ಥರು ಮನೆಮಾಡಿಕೊಂಡು ಇರುತ್ತಿದ್ದರು. ಅವರು ಸುಶೀಲರೂ, ಸತ್ಯಪ್ರಿಯರೂ, ಕಾರ್ಯದಕ್ಷರೂ ಆಗಿದ್ದರು. ಬಡತನವು ಮಾತ್ರ ಕೈತೊಳೆದುಕೊಂಡು ಅವರ ಬೆನ್ನು ಹತ್ತಿತ್ತು. ಮನೆಯಲ್ಲಿ ಅವರು, ಅವರ ಕುಟುಂಬ ಹಾಗು ಸೌದಾಮಿನಿ, ಸುಮನೆ ಎಂಬ ಇಬ್ಬರು ಹೆಣ್ಣು ಮಕ್ಕಳು ಹೀಗೆ ಒಟ್ಟಿಗೆ ನಾಲ್ಕು ಜನರಿದ್ದರು. ಸೌದಾಮಿನಿಗೆ ಈಗ ಹದಿಮೂರು ವರ್ಷಗಳು ತುಂಬಿ, ಹದಿನಾಲ್ಕರಲ್ಲಿ ಬಿದ್ದಿತ್ತು. ಗೋವಿಂದರಾಯರು ಇವಳ ಲಗ್ನದ ಕೊಳಪಾಟದಲ್ಲಿಯೇ ಸಿಕ್ಕು ಬದ್ದಾಡುತ್ತಿದ್ದರು. ಅವರು ಅಲ್ಲಿಯ ಒಂದು ಜವಳೀ ಅಂಗಡಿಯಲ್ಲಿ ಗುಮಾಸ್ತನ ಕೆಲಸವನ್ನು ನೋಡುತ್ತಿದ್ದರು. ಅವರಿಗೆ ತಿಂಗಳೊಂದಕ್ಕೆ ಹದಿನೈದು ರೂಪಾಯಿ ಸಂಬಳವು ದೊರೆಯುತ್ತಿತ್ತು. ಇದರ ಹೊರತು ಬೇರೆ ಪ್ರಾಪ್ತಿಯೇನೂ ಇದ್ದಿಲ್ಲ. ಅದರಿಂದ ಅವರು ಇಷ್ಟೇ ಹಣದಲ್ಲಿ ಕೈಬಿಗಿಹಿಡಿದು

ಅಂತೂ ಇಂತೂ ಪುಣೆಯಂಥ ಪಟ್ಟಣದಲ್ಲಿ ಕೂಡ ತಮ್ಮ ಪ್ರಪಂಚವನ್ನು ಸಾಗಿಸುತ್ತಿದ್ದರು. ವಾಚಕರೇ, ಇಂತಹ ತುಟ್ಟಿಯ ದಿವಸಗಳಲ್ಲಿ ನಾಲ್ಕು ಜನರ ಪ್ರಪಂಚವು ಅಂಥಲ್ಲಿ ಹೇಗೆ ಸಾಗುತ್ತಿರಬಹುದೆಂಬದನ್ನು ನೀವೇ ತರ್ಕಿಸಿರಿ. ಒಂದು ಒಲೆ ಮಾಡಿತೆಂದರೆ, ಏನುಬೇಕು, ಏನುಬೇಡ! ಎಲ್ಲವೂ ಬೇಕಾಗುವದು. ಮನೆಕಟ್ಟಿ ನೋಡಬೇಕು; ಮದುವೆಯನ್ನು ಮಾಡಿ ಮನ ಗಾಣಬೇಕು. ಸಂಸಾರವನ್ನು ಮಾಡಿ, ಸಂಶಯವನ್ನು ಕಳೆದುಕೊಳ್ಳಬೇಕು. ಎಂದು ಹಿರಿಯರು ಅನ್ನುವ ಮಾತೇನೂ ಸುಳ್ಳಲ್ಲ! ಗೋವಿಂದರಾಯರ ಮನೆತನದ ಸ್ಥಿತಿಯನ್ನು ವರ್ಣಿಸುವದು ನಮ್ಮಿಂದಾಗದು. ಹೆಣ್ಣುಮಕ್ಕಳ ಹಾಗು ಹೆಂಡತಿಯ ಸೀರಿ, ಕುಪ್ಪಸ, ಬಳಿ, ಮುಂತಾದ ಜಿನಸುಗಳನ್ನು, ಸ್ವಂತದ ದೋತರ, ರುಮಾಲು, ಅಂಗಿ ಮೊದಲಾದ ಅರುವೆಗಳನ್ನು ಕೊಳ್ಳ ಬೇಕಾದರೆ, ಸಂಬಳದ ಹೊರತು ಅವರಿಗೆ ಬೇರೆ ಯಾವ ಸಾಧನವೂ ಇದ್ದಿದ್ದಿಲ್ಲ. ಎಲ್ಲವೂ ಅವರ ಹದಿನೈದು ರೂಪಾಯಿ ಸಂಬಳದಲ್ಲಿಯೇ ಆಗ ತಕ್ಕದ್ದು. ಇದರ ಹೊರತು ಹೊಟ್ಟೆ! ಅಯ್ಯೋ, ಎಂಥ ದುರವಸ್ಥೆಯಿದು ಮಾತಾಡಲಿಕ್ಕೆ ಪ್ರತಿಯೊಬ್ಬರಿಗೆ ಬರುತ್ತದೆ. ಆದರೆ ಮಧ್ಯಾನ್ಹವಾಗಿ ಹೊಟ್ಟೆಯಲ್ಲಿ ಕಾಗೆಗಳು ಕೂಗಹತ್ತಿದವೆಂದರೆ, ಆ ಮಾತುಗಳೆಲ್ಲ ಸದ್ದಿಲ್ಲದೆ ಅಡಗಿ ಹೋಗುವವು. ಇಂಥ ಸಂಸಾರದಲ್ಲಿ ಏನು ಸುಖವಿರಬಹುದು? ಇಂದು ಪಾರಾಯಿತು. ನಾಳೆ ಹೇಗೆ? ಈ ಪ್ರಕಾರ ಸ್ಥಿತಿಯಿದ್ದಲ್ಲಿ ಸಂಸಾರ ವೆಂಥದು? ಹೇಗಾದರೂ ಮಾಡಿ, ಆಯುಷ್ಯದ ದಿವಸಗಳನ್ನು ಕಳೆಯು ವದು, ಬೇರೆ ಏನು? ಗೋವಿಂದರಾಯರ ಸ್ಥಿತಿಗಿಂತಲೂ ನಿಕೃಷ್ಟಾವಸ್ಥೆ ಯನ್ನು ಹೊಂದಿದ ಸಾವಿರಾರು ಕುಟುಂಬಗಳು, ಈ ನಮ್ಮ ಹತಭಾಗ್ಯ ದೇಶವಾದ ಭರತಖಂಡದಲ್ಲಿ ಜೀವನ ಕಲಹಕ್ಕೊಳಗಾಗಿ ಪೇಚಾಡುತ್ತಿ ರುವವು. ನಮ್ಮ ಸುಸ್ಥಿತಿಯ ದೇಶಬಾಂಧವರಿಗೆ ಅವುಗಳ ವಿಷಯದಲ್ಲಿ ಅಂತಃಕರಣವು ಕರಗಲೊಲ್ಲದು; ಅವರ ಎದೆಯೊಡೆದು ನೀರಾಗಲೊಲ್ಲದು ಜೀವನಕಲಹದ ಭಯಂಕರ ಸ್ಥಿತಿಯನ್ನು ನೋಡಿ, ಅವರ ದಯಾ-ಸಮು ದ್ರವು ಏಕೆ ಉಕ್ಕೇರಬಾರದು? ಅವರು ಪಾಪ-ಪುಣ್ಯಗಳ ಪರಿವೆಯನ್ನು ಬಿಟ್ಟು ಕಲ್ಲೆದೆಯವರಾಗಿ, ರಥಗಳಲ್ಲಿ ಕಳಿತು, ಪಾತರದವರ ಮನೆಯನ್ನು

ನೇರಿ, ಸುರಾಪಾನದಿಂದ ಮತ್ತರಾಗಿ, ಐಷ-ಆರಾಮುಗಳಲ್ಲಿ ಕಾಲವನ್ನು ಕಳೆಯುತ್ತಿರುವರು. ಅಯ್ಯೋ ನಮ್ಮ ಹಿಂದುಸ್ಥಾನ ನಿವಾಸಿಗಳ ಎಂಥ ದುರ್ದೈವವಿದು ! ಇರಲಿ.

ಗೋವಿಂದರಾಯರು ಇಲ್ಲಿಯ ವರೆಗೆ ತಮ್ಮ ಸಂಸಾರವನ್ನು ಹೇಗಾದರು ಮಾಡಿ ಸಾಗಿಸುತ್ತ ಬಂದಿದ್ದರು. ಅವರಿಗೆ ಪ್ರಪಂಚಕ್ಕಾಗಿ ಇನ್ನೂರು ರೂಪಾಯಿ ಸಾಲವಾಗಿತ್ತು. ಅದನ್ನು ಹೇಗೆ ಕಳೆಯಬೇಕೆಂಬ ವಿಚಾರದಲ್ಲಿ ತೊಡಗಿದ್ದರು. ಅಷ್ಟರಲ್ಲಿ ಮಗಳ ಮದುವೆಯ ವಿಚಾರವು ಅವರ ಮುಂದೆ ಬಂತು. ಬಡತನ ಸ್ಥಿತಿಯಲ್ಲಿ ಮದುವೆಯಾಗುವ ಬಗೆಯೇನು ? ಅವರ ಪ್ರಪಂಚ ಸಾಗುವದೇ ಬಿಗಿಯಾಗಿತ್ತು. ಆದರೂ ಗೋವಿಂದರಾಯರು ತಮಗೆ ಅನುಕೂಲಿಸುವಂತೆ ತೋರಿದ ಎಷ್ಟೋ ಸ್ಥಳಗಳನ್ನು ನೋಡಿದರು ಆದರೆ ಒಂದೂ ಕೂಡಿ ಬರಲಿಲ್ಲ. ಆಗ ಅವರು ಬಹಳೇ ನಿರಾಶರಾದರು. ಅಂಗಡಿಯಲ್ಲಿ ಹತ್ತು ತಾಸು ಕೆಲಸ ಮಾಡಿ, ಬೇಸತ್ತು ಮನೆಗೆ ಬರುವದೇ ತಡ; ಮತ್ತೆ ಮದುವೆಯ ಸಂಬಂಧದ ಮಾತುಗಳಿಗೆ ಆರಂಭವಾಗುವದು. 'ಇದೇ ಈಗ ಈ ನೆರೆಮನೆಯ ಕಕ್ಕಿಯವರು ಬಂದಿದ್ದರು. ಅವರು ಆ ಜಾನಗಲ್ಲ ವಕೀಲರ ಮಗನಿರುವನು. ಅದು ಇವುನೆವರಾ ಒಮ್ಮೆ ಕೇಳಿ ನೋಡಬೇಕೆಂದು ಹೇಳಿಹೋದರು ' ಇವೇ ಮೊದಲಾದ ಸಂಗತಿಗಳು, ಅವರ ಹೆಂಡತಿಯ ಬಾಯಿಯಿಂದ ಹೊರಬೀಳುತ್ತಿದ್ದವು. ಇತ್ತಿತ್ತಲಾಗಂತೂ ಗೋವಿಂದರಾಯರು ಬಹಳೇ ಬೇಸತ್ತಿದ್ದರು ಪ್ರಪಂಚದ ವಿಷಯವಾಗಿಯೂ, ಬಡತನದ ವಿಷಯವಾಗಿಯೂ ಅವರಲ್ಲಿ ಪೂರ್ಣ ತಿರಸ್ಕಾರವುಂಟಾಗಿತ್ತು. ಒಂದು ಕಡೆಗೆ ಸಾಲದ ಹಾಗು ಬಡತನದ ಚಿಂತೆ; ಮತ್ತೊಂದು ಕಡೆಗೆ ಮಗಳ ಮದುವೆಯ ಚಿಂತೆ; ಹೀಗಾಗಿ ಅವರು ಚಿಂತೆಯೆಂಬ ಕತ್ತರಿಯಲ್ಲಿ ಸಿಕ್ಕು ತೀರ ಉದಾಶೀನರಾಗಿದ್ದರು. ಅವರ ಮೋರೆಯು ಕಳೆಗುಂದಿ ಬೇನೆಯವರಂತೆ ಬೆಳ್ಳಗಾಗಿತ್ತು. ಅಶಕ್ತತೆಯು ದಿನವೊಂದಕ್ಕೆ ಹೆಚ್ಚಾಗ ಹತ್ತಿತು. ಈ ಸ್ಥಿತಿಯಲ್ಲಿ ಅವರು ಒಂದು ದಿವಸ ಏನೇನೋ ವಿಚಾರ ಮಾಡಿ, ಹೆಂಡತಿಗೆ—ಇನ್ನೊಂದು ಸ್ಥಳವನ್ನು ನೋಡಿ ಬರುತ್ತೇನೆಂದು ಹೇಳಿ ಮನೆಯಿಂದ ಹೊರಬಿದ್ದರು. ತುಸು ದೂರ ಹೋದ ಬಳಿಕ ಅವರು

ಮನೆಯ ಕಡೆಗೆ ತಿರುಗಿ ನೋಡಿದರು. ಆಗ ಅವರ ಕಣ್ಣೊಳಗಿಂದ ಅಶ್ರುಗಳು ಉದರಹತ್ತಿದವು. ಅವರ ಮನಸಿಗೆ ಏನು ಅನಿಸಿತೋ ದೇವರಿಗೇ ಗೊತ್ತು ! ಗೋವಿಂದರಾಯರು ಆ ಹೊತ್ತು, ಮನೆಬಿಟ್ಟು ಹೋದವರು ತಿರುಗಿಮನೆಗೆ ಬರಲೇ ಇಲ್ಲ !

---

## ೬ ನೆಯ ಪ್ರಕರಣ.

### ಆತ್ಮಹತ್ಯೆ.

ಸಂಧ್ಯಾಸಮಯವು ಹಗಲೆಲ್ಲ ನಡಿದು ದಣಿದ ದಿನಮಣಿಯು,ದಣಿವಾರಿಸಿಕೊಳ್ಳುವ ಸಿದ್ಧತೆಯಲ್ಲಿದ್ದನು ಸಂಗಮದಮೇಲೆ ಮೋಟಾರ,ಧಮಣಿ, ಕಾಲುಬಂಡಿ ಮತ್ತುರಥ ಇವುಗಳ ಸಂದಣಿಯಾಗಿತ್ತು. ಎಷ್ಟೋ ಮೋಟಾರಗಳು 'ಭೋಂ ಭೋಂ' ಎಂದು ಸಪ್ಪಳಮಾಡುತ್ತಒಂದರ ಹಿಂದೊಂದು ಬರಹತ್ತಿದವು. ಸರೀರಿ, ಒತ್ತಟ್ಟಿಗೆ ಸರೀರಿ; ಹಾದಿಯನ್ನು ಕೊಡಿರಿ ಎಂದು ಒದರುತ್ತ ಕೋಚಮನ್ನರು, ರಥಗಳನ್ನು ಒತ್ತರದಿಂದ ಓಡಿಸತೊಡಗಿದ್ದರು. ನಡುನಡುವೆ ಕಾಲುಬಂಡಿಗಳ ಗಂಟೆಗಳ ಸಪ್ಪಳವಾದರೂ ಕೇಳಬರುತ್ತಿತ್ತು. ಮೇಲೆ ಹೇಳಿದ ಮೋಟಾರ, ಧಮಣಿ, ಕಾಲುಬಂಡೆ, ರಥ, ಇವುಗಳಲ್ಲಿ ಕುಳಿತುಕೊಂಡು ಬರುವ ಜನರಲ್ಲದೆ, ಬೇರೆ ಎಷ್ಟೋಜನರು ಕಾಲುನಡಿಗೆಯಿಂದ ಬರಹತ್ತಿದರು. ಆ ಕಾಲದ ಸಂಗಮದ ಮೇಲಿನ ಶೋಭೆಯಂತೂ ಅವರ್ಣನೀಯವಾಗಿತ್ತು. ಅಕ್ಕ-ತಂಗಿಯರೋಪಾದಿಯಲ್ಲಿರುವ ಮುಳಾ-ಮುಠಾ ಎಂಬ ಹೊಳೆಗಳು ಒಂದಕ್ಕೊಂದು ಕೂಡಿಕೊಂಡು 'ಖಳ ಖಳ'ವೆಂದು ಸಪ್ಪಳ ಮಾಡುತ್ತ ಹರಿಯುತ್ತಿದ್ದವು. ಬ್ರಿಜ್ಜವು [ಪೂಲು] ನೋಡುವವರನ್ನು ಸೋಜಗಗೊಳಿಸುತ್ತಿತ್ತು. ತಂಗಾಳಿಯು ಜನರ ಮನಸ್ಸನ್ನು ಸಂತೋಷಗೊಳಿಸುತ್ತಿತ್ತು. ಘಾಟದ ಮೇಲಿದ್ದ ಜನರಲ್ಲಿ ಎಷ್ಟೋಜನರು ವಿನೋದ ಮಾಡುವದರಲ್ಲಿಯೂ. ಬೇರೆ ಕೆಲವರು ಕಾರದಾಣಿ, ಚುರಬುರಿ, ಉಂಡಿ, ಜಿಲೇಬಿ ಮೊದಲಾದ ಜೀನಸುಗಳನ್ನು ತಿನ್ನುವದರಲ್ಲಿಯೂ, ಮತ್ತೆ ಕೆಲವರು, ಇಂಪಾದ ಸ್ವರದಿಂದ ಹಾಡುವದ

ರಲ್ಲಿಯೂ, ಬೇರೆ ಹಲವರು ತಮ್ಮ ತಮ್ಮ ಪ್ರಿಯ-ಸ್ತ್ರೀಯರೊಡನೆ ಸರಸ ಸಲ್ಲಾಪಗಳನ್ನು ಆಡುವದರಲ್ಲಿಯೂ ಮಗ್ನರಾಗಿದ್ದರು. ಸಾರಾಂಶ, ಅಲ್ಲಿ ಎತ್ತ ನೋಡಿದತ್ತ ಎಲ್ಲರು ಆನಂದದಲ್ಲಿಯೇ ಮಗ್ನರಾದಂತೆ ತೋರುತ್ತಿತ್ತು. ಮೇಲೆ ಮೇಲೆ ನೋಡುವವರಿಗೆ, ಅಲ್ಲಿ ದುಃಖವುಳ್ಳವರು ಯಾರಾದರು ಇರಬಹುದೆಂಬ ಕಲ್ಪನೆಯು ಸಹಿತ ಆಗುವಂತಿದ್ದಿಲ್ಲ; ಯಾಕಂದರೆ, ರಮ್ಯವಾದ ಸಾಯಂಕಾಲದ ಸಮಯದಲ್ಲಿ ಪ್ರತಿಯೊಬ್ಬರು ಕ್ಷಣ ಹೊತ್ತು ಆನಂದದಿಂದ ಕಾಲಕ್ರಮಣವನ್ನು ಮಾಡಬೇಕೆಂದು ಬಂದವರು ಅಂದಬಳಿಕ ಅವರಲ್ಲಿ ಚಿಂತಾಕ್ರಾಂತ ಮನುಷ್ಯನಿರುವದು ಅಸಂಭವವು! ಹೀಗೆ ಪ್ರತಿಯೊಬ್ಬರಿಗೆ ಅನಿಸುವದು ಸ್ವಾಭಾವಿಕವಾಗಿದೆ; ಆದರೆ ಈ ತಿಳುವಳಿಕೆಯು ಸರಿಯಾದದ್ದಲ್ಲ ಏಕಂದರೆ, ಯಾವ ಸಂಗತಿಯಿಂದ ಒಬ್ಬನಿಗೆ ಆನಂದವಾಗುತ್ತದೋ, ಅದೇ ಸಂಗತಿಯಿಂದ ಮತ್ತೊಬ್ಬನಿಗೆ ದುಃಖವಾಗುತ್ತದೆ. ನೋಡಿ; ಯಾವ ರಜನೀನಾಥನು ತನ್ನ ಶೀತಲವಾದ ಕಿರಣಗಳಿಂದ ಎಲ್ಲರಿಗೆ ಸುಖವನ್ನು ಕೊಡುತ್ತಾನೋ, ಅವನೇ ವಿರಹೀ-ಜನರಿಗೆ ತಾಪದಾಯಕನಾಗುತ್ತಾನೆ; ಮತ್ತು ಆತನ ಪ್ರಕಾಶವು ಕಳ್ಳರಿಗೆ ಅಸಹ್ಯವಾಗುತ್ತದೆ. ಯಾವ ಸ್ಥಳದಲ್ಲಿ ಅಳುವ ಸ್ವರವು ಕೇಳಬರುತ್ತದೋ, ಅಲ್ಲಿಯೇ ಒಳ್ಳೇಬಾಯಿತು; ನನ್ನ ಪಾಲುಗಾರನೊಬ್ಬನು ಸತ್ತನು. ಇನ್ನು ಎಲ್ಲ ಬದುಕಿಗೆ ನಾನೇ ಬಾಧ್ಯಸ್ಥನು ಎಂದು ಅನ್ನುತ್ತ ದೊಡ್ಡ ದನಿಯಿಂದ ನಗುವ ಸಪ್ಪಳವಾದರೂ ಕೇಳಬರುತ್ತದೆ. ಸು-ಪ್ರಭಾತ ಸಮಯವು ಅಚ್ಛ-ವಿದ್ಯಾರ್ಥಿಗಳಿಗೆ ಸುಖವನ್ನು ಕೊಟ್ಟರೂ, ಪ್ರಣಯೀಜನರಿಗೆ ತಾಪವನ್ನುಂಟುಮಾಡುತ್ತದೆ. ಜಡಿ-ಮಳೆಯು ಪ್ರಾರಂಭವಾಯಿತೆಂದರೆ, ಹಳ್ಳಿಯೊಳಗಿನ ಒಕ್ಕಲಿಗರಿಗೆ ಆನಂದವಾಗುತ್ತದೆ ಆದರೆ ಅದೇ ಜಡಿ-ಮಳೆಯು ಪಟ್ಟಣದೊಳಗಿನ ಜನರಿಗೆ ಅಸಮಾಧಾನವನ್ನುಂಟುಮಾಡುತ್ತದೆ. ಇದರಂತೆ ಸಂಗಮದ ಮೇಲಿನ ಸೊಬಗು ಎಲ್ಲರಿಗೂ ಆನಂದವನ್ನೇ ಉಂಟುಮಾಡುತ್ತಿತ್ತೆಂದು ಹೇಳಿದರೆ, ಆ ಮಾತು ಸರಿಯಾಗಲಾರದು. ಅಗೋ ನೋಡಿರಿ; ಎಲ್ಲರನ್ನು ಬಿಟ್ಟು ಒತ್ತಟ್ಟಿಗೆ ಆ ಘಾಟದ ತುದಿಯಲ್ಲಿ ಯಾವನೋ ಒಬ್ಬನು ಕುಳಿತಿರುವನು. ಅವನ ಮೋರೆಯು ಭಯಂಕರವಾದ ಚಿಂತೆಯಿಂದ ಬಾಡಿರುವದು. ಗಲ್ಲ-ತುಟಿಗಳ ಮೇಲಿನ ಕೆಂಬಣ್ಣವು

ಅಳಿದು, ಅವು ಕ್ಷಯರೋಗಿಯ ಗಲ್ಲ-ತುಟಿಗಳಂತೆ ಬೆಳ್ಳಗಾಗಿರುವವು. ಕಣ್ಣೊಳಗಿನ ತೇಜವು ಇಲ್ಲದಂತಾಗಿ, ಅವು ನಿಸ್ತೇಜವಾಗಿರುವವು. ಆದರೂ ಆತನ ಬೇರೆ ಲಕ್ಷಣಗಳ ಮೇಲಿಂದ, ಆತನು ಮೊದಲು ಸವಿಗಾರನೂ ಉತ್ಸಾಹವುಳ್ಳವನೂ ಇದ್ದು ಈಗ ಮಾತ್ರ ಯಾವದೋ ಒಂದು ಭಯಂಕರ ಸಂಕಟಕ್ಕೊಳಗಾಗಿರಬೇಕೆಂಬದು ಸಹಜವಾಗಿ ಊಹಿಸಲಿಕ್ಕೆ ಬರುವಂತಿದೆ. ಅಗೋ ನೋಡಿರಿ; ಆತನು ಶೂನ್ಯ-ದೃಷ್ಟಿಯಿಂದ ಕೆಲವು ಕಾಲ ಆಕಾಶದ ಕಡೆಗೂ, ಕೆಲವು ಕಾಲ ಅಲ್ಲಿದ್ದ ಜನರ ಕಡೆಗೂ ನೋಡುತ್ತಿರುವನು. ಆತನು ಒಮ್ಮೊಮ್ಮೆ ಸಂಗಮದ ಕಡೆಗೆ ನೋಡಿ, ನಿಟ್ಟುಸಿರ ಹಾಕುವನು. ಇವುಗಳ ಮೇಲಿಂದ ಆತನು ಯಾವದೋ ಒಂದು ಸಮಯವನ್ನು ನಿರೀಕ್ಷಿಸುತ್ತಿರಬೇಕೆಂಬಂತೆ ತೋರುತ್ತದೆ. ಘಾಟದ ಮೇಲಿನ ಪ್ರತಿಯೊಬ್ಬರು ತಮ್ಮ ತಮ್ಮ ಆನಂದದ ವ್ಯವಸಾಯಗಳಲ್ಲಿ ಮುಳುಗಿ ಹೋಗಿದ್ದರಿಂದ ನಮ್ಮ ಚಿಂತಾಕ್ರಾಂತ ಮನುಷ್ಯನ ಕಡೆಗೆ ಯಾರ ಲಕ್ಷ್ಯವೂ ಇದ್ದಿದ್ದಿಲ್ಲ.

ಮೆಲ್ಲಮೆಲ್ಲನೆ ಮಬ್ಬು-ಗತ್ತಲಾಗಹತ್ತಿತು. ಕೆಲಕೆಲವರು ಘಾಟದ ಮೇಲಿಂದೆದ್ದು ತಮ್ಮ ತಮ್ಮ ಮನೆಯ ಹಾದಿಯನ್ನು ಹಿಡಿದರು. ಪೂಲಿನ ಮೇಲಿನ ಗದ್ದಲವಾದರೂ ಕಡಿಮೆಯಾಯಿತು. ಘಾಟದ ಮೇಲಿನ ದೇವಾಲಯಗಳಲ್ಲಿ ದೀವಿಗೆಗಳು ಹಚ್ಚಲ್ಪಟ್ಟವು. ಜನರ ಸಂದಣಿಯು ಕಡಿಮೆಯಾದ ಹಾಗೆ, ಆ ನಮ್ಮ ಚಿಂತಾಕ್ರಾಂತ ಮನುಷ್ಯನ ಮುಖವು ಕಳೆಯೇರಹತ್ತಿತು. ಅವನು ಮಾತ್ರ ಕೂತ ಸ್ಥಳವನ್ನು ಬಿಟ್ಟು ಕದಲಲಿಲ್ಲ. ಅವನು ಯಾವ ಕಾರಣದಿಂದ ಹಾಗೇ ಕುಳಿತುಕೊಂಡಿದ್ದನೋ, ದೇವರಿಗೆ ಗೊತ್ತು! ಏಳುವರಿಯಾಯಿತು. ಈಗ ಸಂಗಮದ ಮೇಲೆ ಆ ನಮ್ಮ ಚಿಂತಾಕ್ರಾಂತ ಮನುಷ್ಯನ ಹೊರತು ಬೇರೆ ಇಬ್ಬರು ಗೃಹಸ್ಥರು ಮಾತ್ರ ಉಳಿದಿದ್ದರು. ಅವರು ಆತನ ಕಡೆಗೆ ಬೆನ್ನು ಮಾಡಿ, ತುಸು ದೂರದಲ್ಲಿಯೇ ಕುಳಿತುಕೊಂಡದ್ದರಿಂದ ಅವನಿಗೆ ಚನ್ನಾಗಿ ಕಾಣಿಸಲಿಲ್ಲ. ಆ ಚಿಂತೆಗೊಳಗಾದ ಮನುಷ್ಯನು ಎಲ್ಲರೂ ಹೋದರೆಂದು ತಿಳಿದು, ಚಟ್ಟನೆ ತಾನು ಕುಳಿತ ಸ್ಥಳದಿಂದೆದ್ದು, ಮೈಮೇಲಿನ ಉಟ್ಟಧೋತರ ಸಹಿತವಾಗಿ ಎಲ್ಲ ಅರಿವೆಗಳನ್ನು ತೆಗೆದು, ಒಂದು ಕೈಪುಹಾಕಿಕೊಂಡು, ಅವುಗಳನ್ನೆಲ್ಲ

ಒಂದು ಹೊದ್ದು ಕೊಳ್ಳುವ ಧೋತರದಲ್ಲಿ ಸುತ್ತಿ, ಅಲ್ಲಿಯೇ ಒಂದು ದೊಡ್ಡ ಕಲ್ಲಿನ ಬುಡಕ್ಕಿಟ್ಟು, ತಾನು ತೀರ ಘಾಟದ ತುದಿಗೆ ಹೋಗಿ ನಿಂತು ಕೊಂಡನು. ಆತನ ಕಣ್ಣೊಳಗಿಂದ ಕಂಬನಿಗಳು ಉದುರಹತ್ತಿದವು. ಒಂದು ಕ್ಷಣಹೊತ್ತಿನ ಮೇಲೆ ಆತನ ಶೋಕವು ಕಡಿಮೆಯಾಗಿ ಮೋರೆ ಯಮೇಲೆ ನಿಶ್ಚಯದ ಕಳೆಯುಂಟಾಯಿತು. ಆತನು ಒಮ್ಮೆ ಆಕಾಶದ ಕಡೆಗೂ ಮತ್ತೊಮ್ಮೆ ಸುತ್ತಲೂ ನೋಡಿ, ಜಯಜಯ ಮುಳಾ-ಮುಠಾ ನದಿಗಳೇ, ಜಗತ್ತಿನಲ್ಲಿ ನನಗೆ ಯಾರೂ ಆಶ್ರಯಕೊಡಲಿಲ್ಲ. ಆದ್ದರಿಂದ ನಿಮ್ಮ ಕಡೆಗೆ ಬಂದಿರುವೆನು. ನೀವಾದರೂ ನಿಷ್ಠುರರಾಗದೆ, ನನಗೆ ಆಶ್ರಯವನ್ನಿತ್ತು ಸುಖವನ್ನೀಯಿರಿ ”ಎಂದುನುಡಿದುಜಯಶಂಕರ ಜಯ ಶಂಕರ, ಜಯಶಂಕರ, ಜಯಶಂಕರ ಎಂದು ಜಯಘೋಷ ಮಾಡುತ್ತ ನಿಂತಲ್ಲಿಂದಲೇ ಸಂಗಮದಲ್ಲಿ ಧುಮುಕಿಕೊಂಡನು. ಹೊಳೆಗಳು ಆತನ ಪ್ರಾರ್ಥನೆಯನ್ನು ಮನ್ನಿಸಿ ಅವನಿಗೆ ಆಶ್ರಯವನ್ನಿತ್ತವು !

ನಮ್ಮ ಚಿಂತಾಕ್ರಾಂತ ಮನುಷ್ಯನು ಹೊಳೆಯೊಳಗೆ ಧುಮುಕಿ ಕೊಂಡ ಕೂಡಲೆ ‘ ಧಡಂ ’ ಎಂದು ಸಪ್ಪಳವಾಯಿತು. ಆಗ ದೂರದಲ್ಲಿ ಕುಳಿತ ಇಬ್ಬರು ಗೃಹಸ್ಥರು, ಚಟ್ಟನೆ ಎದ್ದು ಓಡುತ್ತೋಡುತ್ತ ಹೊಳೆಯ ದಂಡೆಗೆ ಬಂದರು. ಅವರಿಗೆ ಹೊಳೆಯಲ್ಲಿ ನೊದಲು ಮೊದಲು ಏನೂ ಕಾಣಿಸಲಿಲ್ಲ. ಅವರು ಹಾಗೆಯೇ ದಿಟ್ಟಿಸಿ ನೋಡಹತ್ತಿದರು. ಆಗ ಅವ ರೊಳಗಿನವನೊಬ್ಬನು:—“ ಶಾಮಸುಂದರಾ, ಅಗೋ ನೋಡು. ಯಾವ ನೊಬ್ಬನು ತೇಲುತ್ತ ನಡೆದಿರುವನು. ಅವನೇ ನಿಶ್ಚಯದಿಂದ ಧುಮುಕಿ ಕೊಂಡಂತೆ ತೋರುತ್ತದೆ. ಅವನು ಧುಮುಕಿಕೊಂಡ ಸಪ್ಪಳವೇ ನಮಗೆ ಕೇಳಿಸಿತು. ಪಾಪ ! ಆ ನಿರ್ಭಾಗ್ಯನು ಯಾರಿರಬಹುದು. ಹೋದನು; ನೆಳವಿಗೆ ಬಿದ್ದು ಬಹುದೂರ ಹೋದನು.” ಎಂದು ನುಡಿದನು.

ಕಮಲಾಕಾಂತಾ, ಇಲ್ಲಿ ನೋಡು, ಎಂಥವೋ ಅರಿವೆಗಳು ಕಾಣು ತ್ತವೆ ಅವು ಬಹಳ ಮಾಡಿ, ಆ ಧುಮುಕಿಕೊಂಡ ಮನುಷ್ಯನವೇ ಇರಬ ಹುದು. ನಡೆ ಅವುಗಳಲ್ಲಿ ಪತ್ರಗಿತ್ರ ಅದೆಯೋ ಹೇಗೆ ನೋಡೋಣ ” ಎಂದು ಮತ್ತೊಬ್ಬನು ನುಡಿದನು.

ಕಮ—ಶಾಮಸುಂದರಾ, ತುಸು ಎಚ್ಚರದಿಂದ ಆ! ಇಲ್ಲದಿದ್ದರೆ,

‘ ಬಾವಿಯ ತೆಗೆಯಹೋದರೆ ಬೇತಾಳ ಹೊರಟಿತೆಂ ’ ಬಂತಾದೀತು

ಶಾಮ—ಇದರಲ್ಲಿ ಇಷ್ಟು ಹೆದರಿಕೆಯೇಕೆ? ನಾವೇನು ತುಡುಗ ಮಾಡುತ್ತೇವೋ ಏನು? ಅವನ ಅಂಗಿಯಲ್ಲಿ ಶಸ್ತ್ರವಿದ್ದರೆ ಅದನ್ನಷ್ಟು ಒಯ್ದು ಅವರ ಮನೆಯವರಿಗೆ ಮುಟ್ಟಿಸೋಣ. ಕಮಲಾಕಾಂತಾ, ಯಾರು ಈ ರೀತಿಯಿಂದ ಆತ್ಮಹತ್ಯೆಯನ್ನು ಮಾಡಿಕೊಳ್ಳುತ್ತಾರೋ, ಅವರು ಪತ್ರಗಳನ್ನು ಬರೆದು, ಎಲ್ಲಿಯಾದರೂ ಇಡುತ್ತಿರುತ್ತಾರೆ ಆ ಪತ್ರಗಳ ಮೇಲಿಂದಲೇ ಅವರ ಆತ್ಮಹತ್ಯೆಯ ವಿಮರ್ಶೆಯಾಗುತ್ತದೆ. ಅದುನೋಡು, ಅವನು ತನ್ನ ಅರಿವೆಯೊಳಗಿನ ಪತ್ರವನ್ನು ಯಾರಾದರು ಬಂದು ಹುಡುಕಲೆಂದೇ, ಅವುಗಳ ಮೇಲೆ ಒಂದು ದೊಡ್ಡ ಕಲ್ಲನ್ನಿಟ್ಟಿರುವನು !

‘ ಒಳ್ಳೇದು ನಡೆ ’ ಎಂದು ಕಮಲಾಕಾಂತನು ಶಾಮಸುಂದರನ ಮಾತಿಗೆ ಒಪ್ಪಿಕೊಂಡನು. ಕೂಡಲೆ ಅವರಿಬ್ಬರು ಅರಿವೆಗಳಿದ್ದೆಡೆಗೆ ಹೋಗಿ ಅವುಗಳನ್ನು ಒಂದೊಂದೇ ಬೇರೆಮಾಡಿ ನೋಡಹತ್ತಿದರು ಆಗ ಅವರಿಗೆ ಮೋಹರು ಮಾಡಿದ ಒಂದು ಪತ್ರವು ದೊರೆಯಿತು. ಆಗ ಅವರಿಬ್ಬರು ಆ ಪತ್ರವನ್ನೂ ಅರಿವೆಗಳನ್ನೂ ತಕ್ಕೊಂಡು ಕಾಲೇಜದ ಹಾದಿಯನ್ನು ಹಿಡಿದರು. ಮಾರ್ಗದಲ್ಲಿ ಈಗಾದ ಆತ್ಮಹತ್ಯೆಯ ವಿಷಯವಾಗಿಯೂ ಬೇರೆ ಎಷ್ಟೋ ಸಂಗತಿಗಳ ಬಗ್ಗೆಯೂ ಹರಟೆಗಳು ನಡೆದಿದ್ದವು. ಆ ಹರಟೆಗಳ ಗೋಜು ನಮಗೇತಕ್ಕೆಬೇಕು ? ವಾಚಕರೇ, ನಾವೂ ಅವರ ಹಿಂದಿಂದೇ ಕಾಲೇಜವನ್ನು ಸೇರೋಣ; ಅಂದರೆ ಅವರು ಅಲ್ಲಿ ಪತ್ರವನ್ನೋದುವಾಗ ಆ ಆತ್ಮಹತ್ಯೆಯನ್ನು ಮಾಡಿಕೊಂಡ ಮನುಷ್ಯನ ಶುದ್ಧಿಯು ತಿಳಿಯುವ ಸಂಭವವದೆ !

---

## ೭ನೆಯ ಪ್ರಕರಣ.

### ಗೋವಿಂದರಾಯರ ಪತ್ರ.

ಕಮಲಾಕಾಂತ ಮತ್ತು ಶಾಮಸುಂದರ ಇವರಿಬ್ಬರು ಒಂಭತ್ತು ಗಂಟೆಯ ಸುಮಾರಕ್ಕೆ ಕಾಲೇಜವನ್ನು ಸೇರಿದರು. ಅವರಿಬ್ಬರ ಅಂತಃಕರಣಗಳು ಆ ಪತ್ರವನ್ನೋದುವದಕ್ಕಾಗಿ ಬಹಳ ಆತುರವಾಗಿದ್ದವು.

ಶಾಮಸುಂದರನು ತನ್ನ ಕೋಣೆಯ ಕೀಲಿಯನ್ನು ತೆಗೆದು, ದೀವಿಗೆ ಯನ್ನು ಹಚ್ಚಿದನು. ಇತ್ತ ಕಮಲಾಕಾಂತನಾದರೂ ತನ್ನ ಕೋಣೆಯಲ್ಲಿ ದೀವಿಗೆಯನ್ನು ಹಚ್ಚಿ, ಪತ್ರವನ್ನೋದುವದಕ್ಕಾಗಿ ಶಾಮಸುಂದರನ ಕೋಣೆಯಲ್ಲಿ ಬಂದನು. ಈ ಹೊತ್ತು ಅವರಿಬ್ಬರು ತಿರುಗಾಡಲಿಕ್ಕೆ ಹೊರಡುವ ಪೂರ್ವದಲ್ಲಿಯೇ, ಊಟದ ವ್ಯವಸ್ಥಾಪಕನಿಗೆ 'ಈ ಹೊತ್ತು ಸಂಜೆಗೆ ನಾವು ಊಟಕ್ಕೆ ಬರುವದಿಲ್ಲ.' ಎಂದು ಹೇಳಿಟ್ಟಿದ್ದರಿಂದ ಊಟದ ಹೊತ್ತಿಗೆ ಭೋಜನಾಲಯದಲ್ಲಿ ಇಂಥಿಂಥವರು ಊಟಕ್ಕೆ ಏಕೆ ಬರಲಿಲ್ಲ ಎಂಬ ಬೊಬ್ಬಾಟವಾಗಲಿಲ್ಲ. ಇರಲಿ;

ರಾಮಸುಂದರನು ಅಚ್ಚುಕಟ್ಟು ಸ್ವಭಾವದವನು. ಅವನ ಕೋಣೆ ಯನ್ನು ನೋಡಿದ ಕೂಡಲೆ ಪ್ರತಿಯೊಬ್ಬರಿಗೆ ಆತನ ಈ ಸ್ವಭಾವದ ಮನವರಿಕೆಯಾಗುವಂತಿತ್ತು. ಕೋಣೆಯ ಬಾಗಿಲಲ್ಲಿ ಕಾಲುಗಳನ್ನು ಒರಸಿಕೊಳ್ಳುವದಕ್ಕಾಗಿ ಒಂದು ತಟ್ಟಿನ ಚೂರು ಹಾಕಲ್ಪಟ್ಟಿದ್ದು, ಬಾಗಿಲ ಒಂಭಾಗದಲ್ಲಿ ಬೂಟು ಮುಂತಾದ ಪಾದ-ರಕ್ಷಕ ಸಾಧನಗಳನ್ನಿಡುವದ ಕ್ಕಾಗಿ, ಎರಡು ಫೂಟು ಎತ್ತರದ ಮೇಲೆ ಒಂದು ಹಲಗೆಯು ಗೋಡೆಗೆ ಜೋಡಿಸಲ್ಪಟ್ಟಿತ್ತು. ಕೋಣೆಯ ತುಂಬ ಗುಡಾರವು ಹಾಸಲ್ಪಟ್ಟಿದ್ದು, ಒಂದು ಮೂಲೆಯಲ್ಲಿ ಒಂದು ಟೇಬಲ್ ಇಡಲ್ಪಟ್ಟಿತ್ತು. ಅದರ ಎದುರಿನಲ್ಲಿ ಎರಡು ಖುರ್ಚಿಗಳಿದ್ದು, ಅಲ್ಲೇ ಸಮೀಪದಲ್ಲಿ ಒಂದು ಕನ್ನಡಿಯ ಕಪಾಟು ಇಟ್ಟಿದ್ದು, ಅದರಲ್ಲಿ ಪುಸ್ತಕಗಳು ವ್ಯವಸ್ಥೆಯಿಂದ ಇಡಲ್ಪಟ್ಟಿ ದ್ದವು. ಟೇಬಲದಿಂದ ಒಂದು ಮೊಳ ಅಂತರದ ಮೇಲೆ ಗೋಡೆಗೆ ಹೊಂದಿ ಒಂದು ಕ್ಯಾಲೆಂಡರವು ನೇತಾಡುತ್ತಿತ್ತು; ಮತ್ತು ಅದರ ಹತ್ತರದಲ್ಲಿಯೇ ಮನುಷ್ಯರ ಆಯುಷ್ಯವು ಪ್ರತಿಕ್ಷಣದಲ್ಲಿಯೂ ನಾಶವಾಗುತ್ತಿರುತ್ತ ದೆಂದು ಸೂಚಿಸುತ್ತದೋ ಏನೋ ಎಂಬಂತೆ, ಒಂದು ಗಡಿಯಾರವು 'ಕಟ್ ಕಟ್' ಎಂದು ಸಪ್ಪಳ ಮಾಡುತ್ತಿತ್ತು. ಬಾಗಿಲೆದುರಿಗಿರುವ ಗೋಡೆಗೆ ಒಂದು ದೊಡ್ಡ ಕನ್ನಡಿಯು ತೂಗಹಾಕಲ್ಪಟ್ಟಿದ್ದು, ಸುತ್ತಲಿನ ಗೋಡೆಗಳಿಗೆ ಬಗೆಬಗೆಯ ಚಿತ್ರಗಳು ತೂಗಹಾಕಲ್ಪಟ್ಟಿದ್ದವು. ಟೇಬಲಿನ ಮೇಲೆ ಒಂದು ಜೋಡು ಬತ್ತಿಯ ಕಾಜಿನ ದೀವಿಗೆಯಿತ್ತು. ಕಣ್ಣಿಗೆ ನೋವು ಆಗಬಾರದೆಂದು, ಅದಕ್ಕೆ ಹಸರು ಬಣ್ಣದ ಗ್ಲಾಸವನ್ನು ಹಾಕಿ

ದ್ದರು. ಓಹೋ, ವಾಚಕರೇ, ಇನ್ನು ಈ ವರ್ಣನೆಯು ಸಾಕು. ಅಗೋ ನೋಡಿರಿ, ಕಮಲಾಕಾಂತನು ಪತ್ರವನ್ನೋದಹತ್ತಿದನು. ಅದ್ದರಿಂದ ನಾವೂ ಗದ್ದಲಮಾಡದೆ ಒಮ್ಮನಸಿನಿಂದ ಆ ಪತ್ರದಲ್ಲಿ ಏನು ಬರೆದ ದೆಂಬದನ್ನು ಕೇಳಿಕೊಳ್ಳೋಣ.

**"ದೇಶ-ಬಾಂಧವರಿಗೆ ಒಂದು ಅತ್ಯಗತ್ಯದ ಪ್ರಾರ್ಥನೆಯು"**

ಈಹೊತ್ತು ನನಗೆ ಬೇಸರಾದ ಈ ನನ್ನ ದೇಹಕ್ಕೆ ಜಲ-ಸಮಾಧಿ ಯನ್ನು ಕೊಟ್ಟಿರುವೆನು. ಆದರೆ ನನ್ನ ದೇಹದೊಡನೆ, ನನ್ನ ದುಃಖ ಮಯವಾದ ಅನುಭವವು ಈ ಜಗತ್ತಿನೊಳಗಿಂದ ಇಲ್ಲದಂತಾಗಬೇಕೆಂಬ ನನ್ನ ಇಚ್ಛೆಯು ಇರುವದಿಲ್ಲ. ಕಾರಣ ಯಾರಿಗಾದರು ಈ ನನ್ನ ಪತ್ರವು ದೊರೆತರೆ, ಅವರು ಅದನ್ನು ಜನರೆದುರಿಗಿಡುವದು ತಮ್ಮ ಪವಿತ್ರವಾದ ಕರ್ತವ್ಯವೆಂದು ತಿಳಿದು, ಅದನ್ನು ಪ್ರಸಿದ್ಧಮಾಡಬೇಕೆಂದು ಅತ್ಯಾಗ್ರಹ ದಿಂದ ಬೇಡಿಕೊಳ್ಳುತ್ತೇನೆ.

ಯಾರಿಗಾದರು ನಿಸರ್ಗ-ನಿಯಮದಂತೆ ಹೆಣ್ಣು ಹುಟ್ಟಿದರೆ, ಅದರಲ್ಲಿ ಆ ಕೂಸಿನ ಅಥವಾ ಅವರ ತಾಯಿ-ತಂದೆಗಳ ಅಪರಾಧವೇನು? ಪರಿಸ್ಥಿ ತಿಯ ಕಾಟದ ಮೂಲಕ ಹುಟ್ಟುತ್ತಲೆ ಅದನ್ನು ಎಲ್ಲರು ಬಯ್ಯುವವರೇ! ಅತ್ಯಂತ ಪ್ರಿಯವಾದ ಆ ಹೊಟ್ಟೆಯ ಕರಳನ್ನು ಅದರ ತಾಯಿ-ತಂದೆಗಳು ಬೆಳಸಿ ದೊಡ್ಡದನ್ನಾಗಿ ಮಾಡುತ್ತಾರೆ. ಆವೇಳೆ ಹತ್ತು ಹನ್ನೆರಡು ವರುಷ ಗಳವರೆಗೆ ಜೋಕೆಮಾಡಿದ ಮಗಳ ಮದುವೆಯ ವಿಚಾರವು ಅವರ ಮುಂದೆ ದೆತ್ತೆಂದು ಬಂದು ನಿಲ್ಲುತ್ತದೆ. ಆಗ ಆ ಹುಡುಗಿಯ ತಂದೆಯು ವರನನ್ನು ಹುಡುಕುವದಕ್ಕಾಗಿ ಮನೆಮನೆಗೆ ತಿರುಗಹತ್ತುತ್ತಾನೆ. ಯಾರಾದರು ಯಾವದೊಂದು ಸ್ಥಳವನ್ನು ಸೂಚಿಸಿದರೆ, ಅವನು ಆನಂದ ಭರಿತನಾಗಿ ಅಲ್ಲಿಗೆ ಹೋಗುತ್ತಾನೆ. ಅಲ್ಲಿ ಅವನ ಬಂದ ಉದ್ದೇಶವು ತಿಳಿದ ಕೂಡಲೆ ಅವನೊಡನೆ ಯಾರೂ ಮಾತಾಡುವದಿಲ್ಲ; ಕೆಲವರಂತೂ ಹುಚ್ಚ ನಾಯಿಯಂತೆ ಅವನಮೇಲೆ ಹರಿಹಾಯುತ್ತಾರೆ. ಕೆಲವು ಸ್ಥಳಗಳಲ್ಲಂತೂ ವಿಶಿಷ್ಟ ಹಣವನ್ನು ಕೊಡುವ ಯೋಗ್ಯತೆಯು ಇದ್ದ ಹೊರತು, ಬಿಸಿಲಿ ನಲ್ಲಿ ಬೇಕಾದಷ್ಟು ಬಂದಿದ್ದರೂ ಒಂದು ಅರಗಳಿಗೆ ಸಹ ಕೂಡಗೊಡುವ ದಿಲ್ಲ. ಹೀಗಿದ್ದರೂ ನಿರ್ವಾಹವಿಲ್ಲದೆ ಕನ್ಯೆಯ ಜನಕನು, ಹಗಲು

ರಾತ್ರಿ ಹಸಿವೆನೀರಡಿಕೆಗಳ ಪರಿವೆಯಿಲ್ಲದೆ ಮತ್ತೂ ಮತ್ತೂ ಮತ್ತೂ ಸ್ಥಳಗಳನ್ನು ಹುಡುಕಹತ್ತುತ್ತಾನೆ. ಅವನಿಗೆ ಹೋದಹೋದಲ್ಲಿ ಮುರ ವತ್ತು ಇಲ್ಲದ ಮಾತುಗಳನ್ನೂ, ಉದ್ಧಟತನದ ಉತ್ತರಗಳನ್ನೂ ಕೇಳಿ ಕೊಳ್ಳುವ ಹೊತ್ತು ಬರುತ್ತದೆ. ಮನೆಗೆ ಬಂದ ಕೂಡಲೆ ಮ್ಲಾನವಾದ ಪತ್ನಿಯ ಮೋರೆ, ಮಗಳ ಉದಾಸೀನವಾದ ದಿನಚರ್ಯೆ ಇವು ಕಣ್ಣೆದು ರಿಗೆ ಆ ಎಂದು ನಿಲ್ಲುವವು. ಇಷ್ಟು ಅಲ್ಲದೆ ಮೇಲೆ ದಾರಿದ್ರ್ಯ! ಒಂದು ಕಡೆಗೆ ಮಗಳ ಮದುವೆಯ ಚಿಂತೆ; ಮತ್ತೊಂದು ಕಡೆಗೆ ಹೊಟ್ಟೆಹೊರ ಕೊಳ್ಳುವ ಚಿಂತೆ. ಹೀಗೆ ಚಿಂತೆಯೆಂಬ ಅಡಕೊತ್ತಿನಲ್ಲಿ ಸಿಕ್ಕವನಿಗೆ, ಜೀವವು ಬೇಸರಾದರೆ, ಅದರಲ್ಲಿ ಆಶ್ಚರ್ಯವೇನು? ಇಂತಹ ಸ್ಥಿತಿಯು ಪ್ರಾಪ್ತವಾದರೆ ಬೇಸರಗೊಳ್ಳದೆ ಎಷ್ಟು ಜನರಿರುವರು? ಬೇಡ. ಈ ಸಂಸಾರವೂ ಬೇಡ; ಮತ್ತು ಈ ನಿರ್ದಯ ಜಗತ್ತಿನ ಸಂಪರ್ಕವೂ ಬೇಡ! ಸಮಾಜದ ಅಧಃಪಾತವಾಯಿತು. ಎಷ್ಟೋ ಜನರು ಸಹೋದರತ್ವವನ್ನು ಮರೆತುಬಿಟ್ಟರು. ದುಡ್ಡು ದುಡ್ಡು! ಅವರಿಗೆ ದುಡ್ಡಿನ ಹೊರತು ಬೇರೆ ಏನೂ ಕಾಣದಂತಾಗಿದೆ. ಹುಡುಗೆಯ ಸೌಂದರ್ಯದ ಕೊರತೆಯು ದುಡ್ಡಿನಿಂದ ತುಂಬಿಬರುವದೋ? ಜನರಿಗೆ ಹುಚ್ಚುಹಿಡಿಯಿತು. ದುಡ್ಡಿನ ನೀಚ ವ್ಯವಹಾರಗಳಿಗೆ ತೀಕ್ಷ್ಣತೆಯನ್ನು ಕೊಡುವದಕ್ಕಾಗಿಯೇ ಬ್ರಹ್ಮನು ಸೌಂದರ್ಯವನ್ನುಂಟುಮಾಡಿರುವನೋ? ದೇವರು ಪಿತೃಗಳಿಗೆ ಪುತ್ರರನ್ನು ದಯಪಾಲಿಸಿದ್ದು, ಕೇವಲ ಧನದ ರಾಶಿಯನ್ನು ಬೆಳಸುವದಕ್ಕೋ? ಪಾಪ! ಹುಡುಗನ ತಂದೆಯು, ಹುಡು ಗೆಯ ತಂದೆಯ ಹೋದ ಜನ್ಮದ ವೈರಿಯೋ? ಅಥವಾ ಸಮುದ್ರ-ಮಥ ನದ ಕಾಲಕ್ಕೆ ಉಂಟಾದ ಕಾಲ-ಕೂಟ ವಿಷಯದ ತುಷಾರಗಳು ಭೂಮಿ ಯಮೇಲೆ ಬಿದ್ದು ಅದರಿಂದಲೇ ಇವರ ಉತ್ಪತ್ತಿಯಾಗಿರುವದೋ? ಅಥವಾ ರಾಮಾವತಾರದ ರಾವಣ, ಕೃಷ್ಣಾವತಾರದ ಕಂಸಾಸುರ ಇವೇ ಮೊದಲಾದ ದುಷ್ಟ-ದೇಹಗಳ ಪರಿಣತಿಯಾಗಿ, ಇವರ ಸಾವಿರಾರು ಶರೀರ ಗಳು ಉಂಟಾಗಿರುವವೋ? ಅದು ಏನೇ ಇರಲಿ; ಸಮಾಜವು ಎಷ್ಟು ಸುಧಾರಣೆಯನ್ನು ಹೊಂದಿದರೂ, ಈ ನೀಚವಾದ ದ್ರವ್ಯಲೋಭವೆಂಬ ಕಿಡಿಯು ನಾಶವಾದ ಹೊರತು, ಅದರ ಅಂದರೆ ಸುಧಾರಣೆಯ ಹೆಜ್ಜೆಯು

ಮುಂದೆ ಬಿತ್ತೆಂದು ಅನ್ನಲಿಕ್ಕಾಗದು! ಈ ವರದಕ್ಷಿಣೆಯ ಕಾಲಲ್ಲಿ ಎಷ್ಟು ಮುಗ್ಧ-ಬಾಲಿಕೆಯರ ಕೋಮಲ ಹೃದಯಗಳು ವಿದೀರ್ಣವಾಗಿರಲಿಕ್ಕಿಲ್ಲ? ಎಷ್ಟೋ! ಮಾತಾ-ಪಿತೃಗಳಿಗೆ ಜೀವಿತವು ಬೇಡಾಗಿದ್ದೀತು! ಎಷ್ಟೋ ನಿರಪರಾಧಿಗಳಾದ ತಾಯಂದಿರು ತಮ್ಮ ತಮ್ಮ ಹೊಟ್ಟೇಕರಳಿನ ನತ್ತ ಗೇಡಿಯಾದ ದೈವದಿಂದ ಅಳುಮೋರೆಗೆ ಬಂದಿರಬಹುದು! ಕಾರಣ ಸುಧಾರಣಾಪ್ರಿಯ ತರುಣರೇ, ಈ ವರದಕ್ಷಿಣೆಯ ದುಷ್ಪರಿಣಾಮದ ಕಡೆಗೆ ಲಕ್ಷ್ಯಗೊಡಿರಿ. ಎಲೈ ನನ್ನ ತರುಣಮಿತ್ರರೇ, ಒಬ್ಬನು ನಿಮಗೆ ತನ್ನ ಮಗಳನ್ನು ಕೊಡಬೇಕನ್ನುತ್ತಾನೆ. ಇಷ್ಟೇ ಕಾರಣದ ಸಲುವಾಗಿ, ಅವನು ಶ್ರಮಪಟ್ಟು ಗಳಿಸಿದ ಹಣದ ಮೇಲ ನಿಮ್ಮ ಅಧಿಕಾರವನ್ನು ಪರ್ಯಾಯದಿಂದ ಹೇಳುವಾಗ, ನಿಮ್ಮ ವಿವೇಕಬುದ್ಧಿಯು ನಿಮಗೇನೂ ದೋಷವನ್ನು ಕೊಡುವದಿಲ್ಲವೇ? ಯಾವದೊಂದು ಹುಡುಗೆಯು ನಿಮ್ಮ ಮನಸಿಗೆ ಬಂದಿದ್ದರೂ, ನೂರಿನ್ನೂರು ರೂಪಾಯಿಗಳ ಸಲುವಾಗಿ, ಅವಳನ್ನು ಅಲ್ಲಗಳೆಯುವದು ಸರಿಯೇ? ನೀವು ಎಷ್ಟೋ ತತ್ವವೇತ್ತರ ಹೃದಯಂಗಮವಾದ ವಿಚಾರಗಳನ್ನು ಓದಿರಬಹುದು; ಎಷ್ಟೋ ಮಹಾತ್ಮರ ಉಪದೇಶಪರಿಪ್ಲುತವಾದ ಶಬ್ದಗಳ ಪರಿಣಾಮವು ನಿಮ್ಮ ಹೃತ್ಪಟಲದ ಮೇಲೆ ಬಿಂಬಿಸಿರಬಹುದು! ಆದರೆ ಆ ವಿಚಾರ ಮತ್ತು ಅಮೂಲ್ಯ ಶಬ್ದಗಳು, ಇದೇ ಬಗೆಯ ನೀಚಸ್ಥಿತಿಯಲ್ಲಿದ್ದುಕೊಂಡು, ದುಡ್ಡಿನ ವಿಚಾರವೊಂದನ್ನು ಮಾತ್ರ ಬಿಟ್ಟು; ಉಳಿದವುಗಳನ್ನು ಮೂಲೆಗೊತ್ತಿರಿ; ಎಂದು ಹೇಳುತ್ತಿರುವವೋ? ಕುರೂಪಿಯಾದ ಹುಡುಗೆಯ ಮೋರೆಯ ಮೇಲಿನ ಪ್ಯೈಲಿಯ ಕಲೆಗಳು ಹಣದಿಂದ ತುಂಬಿರುವವೋ? ಅಥವಾ ಅವಳ ಕಲ್ಲಿದ್ದಲೆಯೋಪಾದಿಯಲ್ಲಿರುವ ಕೃಷ್ಣ-ವರ್ಣವು ಬೆಳ್ಳಗಿನ ರೂಪಾಯಿಗಳಿಂದ ಬಿಳಿಯದಾಗುವದೋ? ಆಕೆಯ ದುರ್ಗುಣವೆಂಬ ಕಲ್ಲಿನ ಮೇಲೆ, ‘ಭನ್ ಭನ್’ ಎಂದು ರೂಪಾಯಿಗಳ ಸಪ್ಪಳವಾದರೆ, ಅದಕ್ಕೆ ನೀವು ಮೋಹಿತರಾಗಬೇಕೇ? ಆ ರೂಪಾಯಿಗಳ ಪ್ರಕಾಶದಿಂದ ನೀವು ಕುರುಡರಾಗಬಹುದೋ? ಮಿತ್ರರೇ, ಹೀಗೆ ಮೋಸಹೋಗಬೇಡಿರಿ. ಎಚ್ಚರಾಗಿರಿ. ನಿಮ್ಮಲ್ಲಿದ್ದ ಈಶ್ವರೀ-ಅಂಶವನ್ನು ನಾಶಮಾಡಬೇಡಿರಿ. ಭೂತದಯೆಯನ್ನು ಜಾಗೃತಮಾಡಿರಿ. ನಾವೆಲ್ಲರು

ಸಹೋದರರಲ್ಲವೇ? ಅಂಥವರೊಳೆ ಪಕ್ಷಪಾತವೇಕೆ? ನೀವೆಲ್ಲರು ಎವೆಗಾ
ರರಿದ್ದು, ಮಾವನ ಅರ್ಥಾತ್ ಹೆಂಡತಿಯ ಕಡೆಯಿಂದ ಹಣವನ್ನು ಗಳಿ
ಸುವ ಇಚ್ಛೆಯನ್ನು ಏಕೆ ಮಾಡುವಿರಿ? ಇದು ನಿಜವಾದ ಪೌರುಷವಲ್ಲ;
ಕೈಯಲ್ಲಿ ಬಳೆಗಳನ್ನಿಟ್ಟುಕೊಂಡವರೇ, ಅನ್ಯರ ಹಣದ ಮೋಹಕ್ಕೆ ಒಳ
ಗಾಗಬೇಕು. ನನ್ನ ತರುಣಬಂಧುಗಳೇ, ನಮ್ಮ ನಿಜವಾದ ಪೌರುಷವು
ನಾಶವಾಗುವ ಹೊತ್ತು ಬಂದದೆ. ಅದನ್ನು ಕಾಯ್ದುಕೊಳ್ಳುವದು;
ಅಥವಾ ನಾಶಮಾಡುವದು ನಿಮ್ಮ ಕೈಯಲ್ಲಿರುವದು! ನೀವೇ ಭಾವೀ
ಸಂತತಿಯ ಆಧಾರಸ್ತಂಭಗಳು! ನಿಮ್ಮ ಈಗಿನ ಈ ಕೃತಿಯಿಂದ, ಸಮಾ
ಜದ ತಲೆಯ ಮೇಲಿನ ಭಾವೀ-ಉತ್ಕರ್ಷದ ರಾಜಮುಕುಟವು. ತುಂಡಾ
ದದ್ದನ್ನು ನೋಡಿ, ಯಾರಿಗೆ ತಾನೇ ದುಃಖವಾಗಲಿಕ್ಕಿಲ್ಲ? ಯಾರ
ಕಣ್ಣೊಳಗಿಂದ ದುಃಖಾಶ್ರುಗಳು ಹೊರಸೂಸಲಿಕ್ಕಿಲ್ಲ? ಇಂಥಸಮಾಜವು
ಇರುವದಕ್ಕಿಂತ ಬೇಗ ಹಾಳಾಗುವದೇ ಒಳ್ಳೇದು! ಎಂದು ಯಾರು ನುಡಿ
ಯಲಿಕ್ಕಿಲ್ಲ! ಕಾರಣ ನನ್ನ ತರುಣಬಾಂಧವರೇ, ಏನಾದರು ವಿಚಾರ
ಮಾಡಿರಿ; ಬರೇ ಐಷ-ಆರಾಮವೇ ತಮ್ಮ ಜನ್ಮದ ಇತಿಕರ್ತವ್ಯವೆಂದು
ತಿಳಿಯುವಂಥ, ನಮ್ಮ ಸರ್ವಸ್ವವನ್ನು **ಗೊತ್ತಿಗೆಹಚ್ಚುವಂಥ** ಸೆರೆಯ
ಸಲುವಾಗಿ ಸಾವಿರಾರು ರೂಪಾಯಿಗಳನ್ನು **ಸೂರೆಮಾಡುವಂಥ**, ಹೆಂಡತಿ
ಯನ್ನು ಮಣ್ಣುಮುಕ್ಕಿಸುತ್ತ ಮನೆಯಲ್ಲಿ ಕೂಡಿಸಿ, ಪಾತರದವರ ಮನೆ
ಯಲ್ಲಿ ಬೇಕಾದಂಥ ನೀಚ ಕೆಲಸಗಳನ್ನು ಮಾಡುತ್ತ, ತನ್ನಲ್ಲಿಯ ಹಣದ
ರಾಶಿಯನ್ನು ಮಣ್ಣು-ಪಾಲುಮಾಡುವಂಥ, ಅವಿಚಾರಿಗಳಾದ ನನ್ನ ದೇಶ
ಬಾಂಧವರೇ ನಿಮಗೆ ಬಂಧುಗಳೆನ್ನಲಿಕ್ಕೆ ನನಗೆ ನಾಚಿಕೆಯು ಬರುತ್ತದೆ.
ಏಕೆಂದರೆ, ಬಂಧುವು ಹೀಗೆ ಎಂದೂ ವರ್ತಿಸಲಾರನು. ನಿಮ್ಮ ಸುತ್ತಲೂ
ನಡೆದ ನಿಮ್ಮ ದೇಶಬಾಂಧವರ ಜೀವನಕಲಹವು ನಿಮಗೆ ಕಾಣಿಸುವದಿ
ಲ್ಲವೇ? ಹಸಿವೆಯಿಂದ ಕಂಗೆಟ್ಟು, ಯಾರಾದರು ತುತ್ತುಕೂಳು ಕೊಡು
ವರೆಂಬ ಆಶೆಯಿಂದ, ಅಥವಾ ನಿಮ್ಮ ಎಂಜಲದೊಳಗಿನ ಉಳಿದ ಆಹಾ
ರವಾದರೂ ಸಿಕ್ಕಿತೆಂಬ ಇಚ್ಛೆಯಿಂದ ಬೀದಿ ಬೀದಿಗಳಲ್ಲಿ ಬಳಲುತ್ತ
ತಿರುಗಾಡುವ ನಿಮ್ಮ ದೇಶಬಾಂಧವರನ್ನು ನೋಡಿ, ನಿಮ್ಮ ಎದೆಯೊಡೆದು
ನೀರಾಗುವದಿಲ್ಲವೇ? ನಿಮ್ಮ ಅಂತಃಕರಣವು ಕಳಕಳಿಯಿಂದ ಕೊರಗು

ವವಿಲ್ಲವೇ? ಇಂದಿಗೆ ಸಾವಿರಾರು ನಿಮ್ಮ ಜಾತಿಬಾಂಧವರೇ ಕೂಳು ತುತ್ತಿಗೆ ಎರವಾಗಿ, ನಿಮ್ಮ ದಯಾ-ಸಮುದ್ರವು ಬತ್ತಿಹೋಯಿತೆಂದು, ಡಂಗುರವನ್ನು ಸಾರುತ್ತ, ಈ ಮಾನವೀ ನಿರ್ದಯತೆಗೆ ಬೇಸತ್ತು, ಮೃತ್ಯುವಿಗೆ ಬಲಿಯಾಗಿ, ಸ್ವಾರ್ಥದಿಂದ ತುಂಬಿತುಳುಕುತ್ತಿರುವಂಥ ಈ ಜಗತ್ತಿಗೆ ಎರವಾಗುತ್ತಿರುವರು. ಅವರು ಹೀಗೆ ಮಾಡುವದು ನಿಮಗೆ ಇಷ್ಟವೆಂದು ತೋರುತ್ತದೋ? ಈ ಸಂಗತಿಯು ನಿಮಗೆ ಇಷ್ಟವೆಂದು ತೋರಿದಲ್ಲಿ, ಅದು ನಿಮ್ಮನ್ನು ಬಾಧಿಸದೆ ಎಂದೂ ಬಿಡಲಾರದು. ಈ ಹೊತ್ತು ನೀವು ಯಾರ ಜೀವದ ಮೇಲೆ, ಕುಣಿದಾಡುತ್ತಿರುವಿರೋ, ಯಾರಜೀವದ ಮೇಲೆ, ಸುಖವನ್ನು ಅನುಭೋಗಿಸುತ್ತಿರುವಿರೋ, ಆ ಬಡಪ್ರಾಣಿಗಳ, ನಿಮ್ಮಂಥ ಈಶ್ವರನ ಮಕ್ಕಳ ನಾಶವಾದರೆ, ನಿಮ್ಮ ಐಷ-ಆರಾಮವು ಹೇಗೆ ಉಳಿಯುವದು? ಹೊಲಗಳಲ್ಲಿ ಕಷ್ಟಮಾಡಿ, ಭೂಮಿಯನ್ನು ಯಾರು ಬೀಜಗಾಣಿಸುವರು? ನಿಮ್ಮ ಕೆಲಸ ಬೊಗಸೆಗಳನ್ನು ಯಾರು ಮಾಡುವರು? ಇದರ ವಿಚಾರವನ್ನೇನಾದರು ಮಾಡಿರುವಿರಾ? ಒಮ್ಮೆ ಒಬ್ಬ ಮೂರ್ಖರಾಜನು ಪರಮೇಶ್ವರನ ಬಳಿಯಲ್ಲಿ 'ತಾನು ಕೈಹಚ್ಚಿದ ಪದಾರ್ಥಗಳೆಲ್ಲ ಬಂಗಾರದವಾಗಬೇಕೆ' ಎಂದು ವರವನ್ನು ಬೇಡಿಕೊಂಡನಂತೆ! ಕೊನೆಗೆ ಇದೇ ವರವು ಅವನಿಗೆ ಬರದಂತಾಯಿತು. ಏಕೆಂದರೆ, ಆತನು ಪಡಕೊಂಡ ವರಪ್ರಭಾವದಿಂದ, ಕೈಹಚ್ಚಿದ ಭಾಗವೆಲ್ಲ ಬಂಗಾರದ್ದಾಗಹತ್ತಿತು. ಆಗ ಅವನ ಕಣ್ಣುಗಳು ತೆರೆದವು; ಸ್ವಂತ ಮೂರ್ಖತನದ ಬಗ್ಗೆ ಪಶ್ಚಾತ್ತಾಪವಾಯಿತು. ಈ ಕಥೆಯ ತಾತ್ಪರ್ಯವೇನೆಂದರೆ, ನಿಮ್ಮ ಸ್ಥಿತಿಯು ಆ ಅರಸನಂತಾದರೆ ಅನರ್ಥವಾಗುವದು. ಕಾರಣ ಮೊದಲೇ ಜಾಗ್ರತರಾಗಿರಿ: ಆರ್ಯರ ಭೂತದಯೆಯು ನಾಶವಾಗಿಲ್ಲ; ಅದು ಇನ್ನೂ ಪ್ರಖರವೂ ತೇಜವುಳ್ಳದ್ದೂ ಇರುವದೆಂಬದನ್ನು ನಿಮ್ಮ ಕೃತಿಯಿಂದ ಜನರ ನಿದರ್ಶನಕ್ಕೆ ತಂದುಕೊಡಿರಿ! ಈಗ ಭೂತದಯೆಯೆಲ್ಲ ನಾಶವಾಗಿದೆ; ಆದ್ದರಿಂದ ಏನು ಮಾಡಬೇಕೆಂದು ಹತಾಶರಾಗದೆ, ಬೆಂಕಿಯು ಬಹಳ ಭಾಗವು ನಾಶವಾಗಿ ಒಂದೇ ಕಿಡಿಯು ಉಳಿದಿದ್ದರೂ, ಅದರಿಂದ ಬೇಕಾದಷ್ಟು ಬೆಂಕಿಯನ್ನುಂಟುಮಾಡಲಿಕ್ಕೆ ಬರುತ್ತದೆಂಬ ತತ್ವವನ್ನು ಮುಂದಿಟ್ಟುಕೊಂಡು, ನೀವು ಈಗ ನಿಮ್ಮಲ್ಲುಳಿದ ಅಲ್ಪ ಸ್ವಲ್ಪ ಭೂತದ

ಯೆಯ ಕಿಡಿಯಿಂದ, ಭೂತದಯೆಯೆಂಬ ಅಗ್ನಿಯನ್ನು ಪ್ರಜ್ವಲಿಸಿ, ಆರ್ಯರ ಭೂತದಯೆಯು ಇನ್ನೂ ನೊಂದಿರುವದಿಲ್ಲ; ಅದು ಮೊದಲಿನಷ್ಟೇ ಪ್ರಖರವಾಗಿರುತ್ತದೆಂದು ಜನರಿಗೆ ತೋರಿಸಿ, ಅವರ ಮನವರಿಕೆಯನ್ನು ಮಾಡಿರಿ! ಬಹಳ ಹೇಳುವದೇನು? ನನ್ನ ಅನುಭವ ಹಾಗೂ ಇಚ್ಛೆ ಇವೆರಡನ್ನು ನಿಮ್ಮ ಎದುರಿಗೆ ಎದೆಬಿಚ್ಚಿ ಇಟ್ಟಿರುವೆನು! ಇಷ್ಟರ ಮೇಲೆ ನಿಮ್ಮ ಮನಸ್ಸಿಗೆ ಬಂದಂತೆ ಮಾಡಿರಿ. ಇನ್ನು ನಾನು ಹೋಗಿಬರುತ್ತೇನೆ. ನಮಸ್ಕಾರ! ನಮಸ್ಕಾರ!! ನಮಸ್ಕಾರ!!!

ಪುಣೆ—ಸದಾಶಿವ ಪೇಟೆಯೊಳಗಿನ ಹೌದಿನ ಬಳಿಯಲ್ಲಿರುವ ಮನೆ } ತಮ್ಮ ಶ್ರೇಯೋಭಿಲಾಷಿಯಾದ **ಗೋ. ನಾ. ಕುಲಕರ್ಣಿ.**

---

## ೮ ನೆಯ ಪ್ರಕರಣ.

### ಚಿಂತೆಯ ಪರಮಾವಧಿ.

ಎಂದಿನಂತೆ ಈ ಹೊತ್ತಾದರೂ ಸದಾಸಿವ ಪೇಟೆಯೊಳಗಿನ ಹೌದಿನ ಬಳಿಯಲ್ಲಿ ಪ್ರಾತಃಕಾಲದಲ್ಲಿ ಬ್ರಾಹ್ಮಣರ ಸಂದಣಿಯಾಗಿತ್ತು. ಎಷ್ಟೋ ಜನರು ಸ್ನಾನವನ್ನು ತೀರಿಸಿಕೊಂಡು ಮನೆಯ ಹಾದಿಯನ್ನು ಹಿಡಿದಿದ್ದರು. ಕೆಲವರು ಸ್ನಾನಕ್ಕಾಗಿ ಅಲ್ಲಿಗೆ ಬರಹತ್ತಿದ್ದರು ದೋತರಗಳನ್ನು ಒಗೆಯುವ ಸಪ್ಪಳದಲ್ಲಿ ಗಟ್ಟಿಸಿ ಮಾತಾಡಿದ ಹೊರತು ಒಬ್ಬರ ಮಾತು ಮತ್ತೊಬ್ಬರಿಗೆ ಕೇಳಬರುತ್ತಿದ್ದಿಲ್ಲ. ಎಷ್ಟೋ ಹೆಂಗಸರು ನೀರಿನಿಂದ ತುಂಬಿದ ಜಳಜಳವಾದ ಕೊಡಗಳನ್ನು ಹೊತ್ತುಕೊಂಡು ತಮ್ಮ ತಮ್ಮ ಮನೆಯ ಕಡೆಗೆ ಸಾಗಹತ್ತಿದರು. ಅವರ ಸಂಗಡ ಅವರವರ ಚಿಕ್ಕ ಚಿಕ್ಕ ಹೆಣ್ಣು ಹುಡಿಗೆಯರು ತಂಬಿಗೆ, ಗಿಂಡಿ, ಸೊಂಡೀಥಾಲಿ ಮೊದಲಾದ ಸಣ್ಣ ಸಣ್ಣ ಪಾತ್ರಗಳಲ್ಲಿ ನೀರನ್ನು ತುಂಬಿಕೊಂಡು ಒಳ್ಳೇ ಮೋಜಿನಿಂದ ಹೋಗಹತ್ತಿದ್ದರು. ವಾಚಕರೇ, ನೀವು ಪುರಾಣವನ್ನು ಕೇಳಲಿಕ್ಕೆ ಹೋಗಿರಿ; ಕೀರ್ತನೆಯನ್ನು ಕೇಳಲಿಕ್ಕೆ ಹೋಗಿರಿ; ಅಥವಾ ದೇವರ ದರ್ಶ

ನವನ್ನು ತೆಗೆದುಕೊಳ್ಳಲಿಕ್ಕೆ ಹೋಗಿರಿ; ಹೊಳೆಗೆ ಹೋಗಿರಿ, ತಾತ್ಪರ್ಯ, ಬೇಕಾದಲ್ಲಿ ಹೋದರೂ ಹೆಂಗಸರ ಸಮೂಹವು ನಿಮ್ಮ ಕಣ್ಣಿಗೆ ಬಿದ್ದೇ ಬೀಳುವದು. ನಾಲ್ಕಾರು ಹೆಂಗಸರು ಒತ್ತಟ್ಟಿಗೆ ಕೂಡಿದರೆಂದರೆ, ಅವರ ಮಾತಿಗೆ ಆರಂಭವಾಗಿ, ನಿಯಮಿತ ಮಾತುಗಳು ಹೊರಬೀಳಹತ್ತುತ್ತವೆ ನಿಮ್ಮ ಸೊಸೆಯು ಎಂಥ ಪೈನೆರೆದವಳು? ಇಂಥವಳ ಮದುವೆಯು ಎಂದು ಆಗತಕ್ಕದ್ದು? ಇಂಥವಳು ಗಂಡುಮಗನನ್ನು ಹೆತ್ತಳು; ಇಂಥವಳಿಗೆ ಮಕ್ಕಳೇ ಆಗಲೊಲ್ಲವು; ಇಂಥವಳ ಅತ್ತೆಯು ಅವಳನ್ನು ಬಹಳ ಕಾಡು ತ್ತಾಳೆ; ನನ್ನ ಮಗಳು ಅತ್ತೆಯ ಕಾಟಿಗೆ ಬಹಳೇ ಬೇಸತ್ತಿರುವಳು: ಇಂಥವಳನ್ನು ಅವಳ ಗಂಡನು ಚನ್ನಾಗಿ ಪ್ರೀತಿಸುತ್ತಾನೆ; ಇಂಥವರಲ್ಲಿ ಅತ್ತಿಗೆ ನಾದಿನಿಯುವರದು ಒಂದು ದಿವಸ ಸಹ ಕೂಡುವದಿಲ್ಲ. ನಾನಂತೂ ನಮ್ಮ ಮನೆಯೊಳಗಿನವರಿಗೆಲ್ಲ ವಾಳಿಯಾಗಿರುವೆನು; ಅವ್ವಯ್ಯಾ ಇಂಥ ವಳು ಎಷ್ಟು ದೊಡ್ಡವಳಾಗಿರುವಳು; ಅವಳ ಮದುವೆಯನ್ನು ಮಾಡು ತ್ತಾರೋ ಇಲ್ಲೋ? ಮೊದಲಾದ ಇದೇ ಮಾದರಿಯ ಹರಟೆಗಳು ನಡೆ ಯತಕ್ಕವು. ಈ ಹೊತ್ತು ಹೌದಿನ ಮೇಲೆ ಕೂಡಿದ ಹೆಂಗಸರಲ್ಲಾದರೂ ಇದೇ ಮಾದರಿಯ ಹರಟೆಗಳು ನಡೆದಿದ್ದವು. ಆಗೋ ನೋಡಿರಿ, ಆ ಶ್ರೀ ಶಂಕರನ ದೇವಾಲಯದ ಪೂರ್ವದಿಕ್ಕಿನಲ್ಲಿರುವ ಹೌದಿನ ಮೂಲೆಯಲ್ಲಿ ಇಬ್ಬರುಹೆಂಗಸರು ಏನೇನೋ ಮಾತಾಡುತ್ತ ನಿಂತುಕೊಂಡಿರುವರು. ಅವರು ಏನೇನು ಮಾತಾಡುತ್ತಾರೆಂಬದನ್ನು ಕೇಳೋಣ ನಡೆಯಿರಿ.

ಪಾರ್ವತಿ—ರಾಧಾಬಾಯಿ, ಈ ಹೊತ್ತು ನಿಮ್ಮ ಮೋರೆಯು ಏಕೆ ಸಪ್ಪಗಾಗಿರುವದು? ಏನೂ ಮಾತಾಡದೆ ಹಾಗೇ ಹೊರಟಿದ್ದಿರಲ್ಲ ಅದೇನು ಕಾರಣ?

ರಾಧಾ—ಪಾರ್ವತಿಬಾಯಿ, ಕಾರಣವೇನಿರತಕ್ಕದ್ದು? ಸಹಜವಾಗಿ ಮಾತಾಡಲಿಲ್ಲ.

ಪಾರ್ವ--- ಅದೇಕೆ? ಏನಾದರು ಕಾರಣವಿರಲಿಕ್ಕೇಬೇಕು. ಇಲ್ಲ ದಿದ್ದರೆ ನೀವು ಮಾತಾಡದೆ ಹಾಗೇ ಎಂದೂಹೋಗತಕ್ಕವರಲ್ಲ. ಆ ನಿಮ್ಮ ಬಾಡಿದ ಮೋರೆಯೇ ನಿಮ್ಮ ಚಿಂತೆಯನ್ನು ಸೂಚಿಸುತ್ತಿರುವದು.

ರಾಧಾ---ಪಾರ್ವತಿಬಾಯಿ, ಏನು ಹೇಳಲಿ? ನಮ್ಮ ಸೌದಾಮಿ

ನಿಯ ಮದುವೆಯೊಂದು ಎಂದಾಗುತ್ತದೋ ಏನೋ? ಬಡವನಂತೂ, ಕೈತೊಳೆದುಕೊಂಡು ಬೆನ್ನು ಹತ್ತಿರುವರು. ಜಗತ್ತಿನಲ್ಲಿ ಸ್ಥಳಗಳೇನು ಕಡಿಮೆಯಾಗಿವೆಯೋ? ಆದರೆ ಅವುಗಳಿಂದ ನಮಗೆ ಮಾತ್ರ ಉಪಯೋಗವಿಲ್ಲ! ಯಾಕಂದರೆ ಅವೆಲ್ಲ ವರದಕ್ಷಿಣೆಯ ಸ್ಥಳಗಳು! ನಾವು ಬಡವರು! ವರದಕ್ಷಿಣೆಯನ್ನು ಎಲ್ಲಿಂದ ಕೊಡಬೇಕು? ಅದಿರಲಿ, ನಿನ್ನೆಯಿಂದ ಮತ್ತೊಂದು ಹೊಸ ಚಿಂತೆಯು........ಎಂದು ನುಡಿದು, ಅಳಹತ್ತಿದರು. ಅದನ್ನು ನೋಡಿ ಪಾರ್ವತಿಬಾಯಿಯವರು--ಅವ್ವಯ್ಯಾ ಇದೇನು ಒಮ್ಮೆಲೆ ಅಳಲಿಕ್ಕೆ ಏಕೆ ಹತ್ತಿದಿರಿ? ಅಳುವಂಥ ಪ್ರಸಂಗವಾದರು ಏನು ಬಂದಿರುವದು? ಒಟ್ಟಿಗೆ ಹುಡುಗಿಯ ಮದುವೆಯ ಚಿಂತೆಯಿಲ್ಲವೇ? ಏನು ಮಾಡಬೇಕು? ವರದಕ್ಷಿಣೆಯ ಕಾಲಲ್ಲಿ ಜನ್ಮವೇ ಬೇಡಾಗಹತ್ತಿದೆ! ಮೊನ್ನೆ ಆ ಕುಲಕರ್ಣಿಯವರ ಹುಡುಗಿಯು ಇದರ ಸಲುವಾಗಿಯೇ ಬಾವೀ-ಬಿದ್ದಳಂತೆ! ಇಂಥ ಭೋಗಕ್ಕೆ ಏನು ಮಾಡಬೇಕು?

ರಾಧಾ—ಪಾರ್ವತಿಬಾಯಿ, ಲಗ್ನದ ಚಿಂತೆಯಂತೂ ಒತ್ತಟ್ಟಿಗಿರಲಿ. ನಿನ್ನೆ ಇಳಿಹೊತ್ತಿನಲ್ಲಿ ಒಮ್ಮೆ ಹೊರಗೆ ಹೋದವರು ಇನ್ನೂ ವರೆಗೆ ಮನೆಗೆ ಬಂದಿಲ್ಲ. ಹುಡುಕತಕ್ಕ ಸ್ಥಳಗಳನ್ನೆಲ್ಲ ಹುಡುಕಿ ಬಂದೆನು; ಆದರೆ ಎಲ್ಲಿಯೂ ಸಿಗಲಿಲ್ಲ. ಇನ್ನು ಏನು ಮಾಡಲಿ? ನನಗಂತೂ ಏನೂ ತಿಳಿಯದಂತಾಗಿದೆ, ಪರವೂರಿಗೆ ಹೋಗಿದ್ದರೆ ಮನೆಯಲ್ಲಿ ಹೇಳದೆ ಹೇಗೆ ಹೋಗುವರು? ಮನಸಿನೊಳಗೆ ಚಿಂತೆಗೆ ತುಸು ಸ್ಥಳದೊರೆತರೆ ಸಾಕು; ಕೂಡಲೆ ಅಲ್ಲದ ವಿಚಾರಗಳು ಬರಹತ್ತುವವು. ಪಾರ್ವತಿಬಾಯಿ, ಇನ್ನು ಎಲ್ಲಿ ಮತ್ತು ಯಾರನ್ನು ಹುಡುಕಲಿಕ್ಕೆ ಕಳಿಸಲಿ? ನಿಮ್ಮ ಮಾಧವನು ಮನೆಯಲ್ಲಿರುವನೋ?

ಪಾರ್ವತಿ--ಮನೆಯಲ್ಲಿಯೇ ಇರುವನು; ಆದರೆ ಆತನ ಕೈಯಿಂದೇನಾಗುವದು? ಈ ಊರೊಳಗಿನ ಬೀದಿಗಳೂ ಅವನಿಗೆ ಚನ್ನಾಗಿ ಗೊತ್ತಿಲ್ಲ.

ರಾಧಾ—ನಾನೇನು ಅವನೊಬ್ಬನನ್ನೇ ಕಳಿಸುವದಿಲ್ಲ. ನಾನೂ ಸಂಗಡ ಹೋಗುತ್ತೇನೆ. ಗಂಡಸರ ಕೂಡ ಮಾತಾಡಬೇಕಾದರೆ ಯಾರಾದರು ಬೇಕು; ಕಾರಣ ಅವನನ್ನು ಕರಕೊಂಡು ಹೋಗುತ್ತೇನೆ. ಏನಾದರೂ ಅವನು ಗಂಡಸನಿರುವನು!

"ಒಳ್ಳೇದು; ನಾನು ಹೋದಕೂಡಲೆ ಅವನನ್ನು ನಿಮ್ಮಲ್ಲಿಗೆ ಕಳಿಸಿ ಕೊಡುತ್ತೇನೆ." ಎಂದು ಪಾರ್ವತಿಬಾಯಿಯವರು, ರಾಧಾಬಾಯಿ ಯವರಿಗೆ ಧೈರ್ಯವನ್ನು ಹೇಳಿ, ನೀರಿನ ಕೊಡವನ್ನು ಹೊತ್ತುಕೊಂಡು ಹೊರಟುಹೋದರು. ಇತ್ತ ರಾಧಾಬಾಯಿಯವರಾದರೂ ಕೊಡವನ್ನೂ ಬಿಂದಿಗೆಯನ್ನೂ ತಕ್ಕೊಂಡು ಮನೆಯ ಕಡೆಗೆ ಸಾಗಿದರು.

ರಾಧಾಬಾಯಿಯವರ ಹಾಗು ಪಾರ್ವತಿಬಾಯಿಯವರ ಮನೆಗಳು ಹೌದಿನ ಹಿಂಭಾಗದಲ್ಲಿಯೇ ಇದ್ದವು. ಪಾರ್ವತಿಬಾಯಿಯವರು ಮನೆ ಯನ್ನು ಮುಟ್ಟುತ್ತಲೇ ಮಾಧವನನ್ನು ಕಳಿಸಿಕೊಟ್ಟರು. ರಾಧಾಬಾಯಿ ಯವರು ಮನೆಯನ್ನು ಸೇರಿ; ಅವನ ಹಾದಿಯನ್ನೇ ನೋಡುತ್ತ ನಿಂತು ಕೊಂಡಿದ್ದರು. ಅವನು ಬಂದಕೂಡಲೆ ಅವರು ಮತ್ತೆ ಗಂಡನನ್ನು ಹುಡು ಕುವದಕ್ಕಾಗಿ ಮಾಧವನೊಡನೆ ಮನೆಯಿಂದ ಹೊರಬಿದ್ದರು.

ತಾಯಿಯು ಹೊರಗೆ ಹೋದ ಬಳಿಕ ಸುಮನೆಯು ಆಡಲಿಕ್ಕೆ ನೆರೆಮನೆಗೆ ಹೋದಳು. ಸೌದಾಮಿನಿಯು ಮಾತ್ರ ಮನೆಯಲ್ಲಿಯೇ ಉಳಿದಳು. ಅವಳು ತಿಳುವಳಿಕೆಯುಳ್ಳವಳಿದ್ದು, ಅವಳಿಗೆ ಸುಖ-ದು:ಖಗಳು ತಿಳಿಯುತ್ತಿತ್ತಿದವು. ಅವಳು ಪ್ರತಿಯೊಂದು ಮನೆಗೆಲಸದಲ್ಲಿ ತನ್ನ ತಾಯಿಗೆ ನೆರವಾ ಗುತ್ತಿದ್ದಳು. ತನ್ನ ಸಲುವಾಗಿಯೇ ತಾಯಿ-ತಂದೆಗಳಿಗೆ ಇಷ್ಟು ತ್ರಾಸವನ್ನು ತಾಳಿಕೊಳ್ಳುವ ಹೊತ್ತು ಬಂದಿದೆಂಬದು ಅವಳಿಗೂ ತಿಳಿದಿತ್ತು. ಅವಳ ಮದುವೆಯ ವಿಷಯವಾಗಿ, ತಾಯಿ ತಂದೆಗಳ ಬಾಯಿಂದ ದು:ಖೋದ್ಗಾ ರಗಳು ಹೊರಟವೆಂದರೆ ಅವಳಿಗೆ ಮರಣ ಪ್ರಾಯದು:ಖವಾಗುತ್ತಿತ್ತು. ತನ್ನ ಮದುವೆಯ ಚಿಂತೆಯೊಳಗಿಂದ ತಾಯಿ ತಂದೆಗಳು ಎಂದು ಮತ್ತು ಹೇಗೆ ಪಾರಾದಾರೆಂದು ಅವಳು ಯಾವಾಗಲೂ ಯೋಚಿಸುತ್ತಿದ್ದಳು. ಇದೇ ಚಿಂತೆಯು ಅವಳನ್ನು ಹಗಲಿರುಳು ಸುಡುತ್ತಿತ್ತು. ಈ ವಿಚಾರಗಳ ಹೊರತು ಬೇರೆವಿಚಾರಗಳೇ ಅವಳ ಮನಸ್ಸಿನಲ್ಲಿಬರುತ್ತಿದ್ದಿಲ್ಲ. ಈಹೊತ್ತು ಮನೆಯಲ್ಲಿ ಯಾರೂ ಇದ್ದಿಲ್ಲ. ಅದ್ದರಿಂದ ಅವಳೊಬ್ಬಳೇ ಮನಬಂದಂತೆ ವಿಚಾರಮಾಡುತ್ತ ಪಡಸಾಲೆಯಲ್ಲಿ ಕುಳಿತುಕೊಂಡಿದ್ದಳು. ಸದ್ಯಸ್ಥಿತಿಯ ಭಯಂಕರವಾದ ಚಿತ್ರವು ಅವಳ ಕಣ್ಣಮುಂದೆ ಕಟ್ಟಿದ್ದರಿಂದ ಅವಳು ಒಮ್ಮೆಲೆ ಅಳಹತ್ತಿದಳು. ದು:ಖದ ಭರವು ತುಸು ಕಡಿಮೆಯಾದ ಬಳಿಕ

ಇವಳು ದೇವರನ್ನು ಸ್ತುತಿಸಹತ್ತಿದಳು." ಎಲೈ ದೇವರೇ, ನಿನಗೆ ಅನಾಥ
ನಾಥನೆಂದು ಅನುತ್ತಾರೆ. ದಯಾಸಾಗರನೆಂದು ಅನ್ನುತ್ತಾರೆ. ನಿನ್ನ ದಯಾ
ನಿಧಿತ್ವವು ವಿಷಯದಲ್ಲಿಯೇ ಬತ್ತಿಹೋಯಿತೋ? ಎಲೈ ಭಗವಂತನೇ,
ನಮ್ಮ ಅಂತವನ್ನು ಎಷ್ಟೆಂದು ನೋಡುವಿ! ನನ್ನಂಥ ದೈವಗೇಡಿಯಾದ
ಕನ್ಯೆಗೆ ಜನ್ಮಕೊಟ್ಟರೆ, ಯಾವ ತಾಯಿ-ತಂದೆಗಳಿಗೆ ಸುಖವಾಗುವದು.
ನನ್ನ ಬದಲು ನನ್ನ ತಾಯಿ ತಂದೆಗೆ ಒಬ್ಬ ಮಗನು ಹುಟ್ಟಿದ್ದರೆ, ಅವರಿಗೆ
ಎಷ್ಟು ಸುಖವಾಗುತ್ತಿತ್ತು? ಇಂದಿನಂತೆ ಚಿಂತಿಮಾಡುತ್ತ ಕೂಡ್ರುವ
ಪ್ರಸಂಗವು ಬರುತ್ತಿದ್ದಿಲ್ಲ? ಸದ್ಯಕ್ಕೆ ನನ್ನ ಸಲುವಾಗಿಯೇ ಅವರು ಇಷ್ಟು
ಕಷ್ಟವನ್ನು ಅನುಭೋಗಿಸಬೇಕಾದರೆ? ದೇವಾ ನಿನಗೆ ಏನಾದರೂ ದಯ
ಬರಲಿ, ಹೀಗೆ ತೀರ ನಿಷ್ಠುರನಾಗಬೇಡ. ನೀನು ಬಡವರತಂದೆಯೂ ಅನಾಥರ
ರಕ್ಷಕನೂ ಆಗಿರುವಿ? ನೀನೇ ನಮ್ಮಂಥವರನ್ನು ವಕ್ರದೃಷ್ಟಿಯಿಂದ
ನೋಡಹತ್ತಿದಿಯೆಂದರೆ ನಾವು ಏನು ಮಾಡಬೇಕು? ಯಾರ ಮುಂದೆ ಶಿರ
ಗೊಡ್ಡಬೇಕು? ಯಾರಿಗೆ ಶರಣು ಹೋಗಬೇಕು? ನಮಗೆ ನಿನ್ನ ಹೊರತು
ದಯೆಯ ಭಿಕ್ಷೆಯನ್ನು ಯಾರು ನೀಡುವರು? ನಾನು ನಿನ್ನ ಹತ್ತರ ಬೇಡಿ
ಕೊಳ್ಳುವದೇನಂದ್ರೆ:—ಗಂಡನು ಎಂಥವನೇ ಇರಲಿ, ಅವನು ಬಡವನಿರಲಿ,
ದ್ರವ್ಯವುಳ್ಳವನಿರಲಿ, ಅವನ ಬಳಿಯಲ್ಲಿ ವಸ್ತುಗಳನ್ನಿಡುವ ಯೋಗ್ಯತೆಯು
ಇರಲಿ, ಇಲ್ಲದಿರಲಿ, ಅವನು ಶಿಕ್ಷಿತನಿರಲಿ, ಅಶಿಕ್ಷಿತನಿರಲಿ, ಅವನ ಮನೆ
ಯಲ್ಲಿ ತಿನ್ನಲಿಕ್ಕೆ ಕೂಳು ಇರಲಿ, ಇಲ್ಲದಿರಲಿ, ಆ ವಿಷಯದಲ್ಲಿ ನನಗೆ ತುಸು
ವಾದರೂ ಚಿಂತೆಯಿಲ್ಲ. ಒಮ್ಮೆ ನನ್ನ ಮದುವೆಯಾಗಿ, ನನ್ನ ತಾಯಿ ತಂದೆ
ಗಳು ಈ ಸಂಕಟದೊಳಗಿಂದ ಪಾರಾದರೆಂದರೆ ತೀರಿತು. ನನ್ನ ಸ್ಥಿತಿಯು
ಏನೇ ಆಗಲಿ, ಅವರಿಗೆ ಸುಖವಾಯಿತೆಂದರೆ ನನಗೂ ಸುಖವಾದಂತಾಯಿತು
ಇಷ್ಟೇ ನನ್ನ ಬಡವಿಯ ಬಯಿಕೆಇರುವದು.? ಎಂದು ನುಡಿದು ಕೆಳಗೆ ಬರ
ದಂಥ ಪದವನ್ನು ಅನ್ನಹತ್ತಿದಳು.

|| ಪದ ||

ಹರಿಯೇ ನಿನ್ನ ಹೊರತು ಪೊರೆವರನುನಾ । ನರಿಯೆ ಹರಿಯೇ || ಪಲ್ಲ ||
ಆದಿಮೂಲ ನಿನ್ನ । ಪಾದನಂಬಿದೆ । ಭೇದವೆನಿಸದೆ । ಮೋದಪಾಯಕ ॥
ಆದರದಿಂದಲಿ ಕಾಯೋ ಸೋದರಮಾವನವೈರಿ । ಮೇದಿನಿಪತಿಯೆ-

ನಿನ್ನಾ । ರಾಧನೆ ಮಾಡಿಸೋ ಹರಿಯೇ ॥ ೧ ॥
ದಾನವಾಂತಕ ನೀನೇ ಗತಿಯೆಂದು । ಸಾನುರಾಗದಿ ಧ್ಯಾನಮಾಳ್ಪೆನು ॥
ಮಾನಾಭಿಮಾನವು ನಿನ್ನಾಧೀನ ವೆಂಕಟರಾಯಾ । ಭಾನುಕೋಟಿ-
ತೇಜ ನಿನ್ನಾರಾಧನೆ ಮಾಡಿಸೋ ಹರಿಯೇ ॥ ೨ ॥
ಪಂಕಜಾಕ್ಷ ಮುಕುಂದನೆಂಬಿದೆ । ಕಿಂಕರಾಜನ ಬಿಂಕವರ್ಜಿತ ॥
ಸಂಕಟಗಳನು ನೀನು ಬಿಂಕದಿ ಪರಿಪಾಲಿಸಯ್ಯಾ । ವೆಂಕಟವಿಠ್ಠಲ-
ನಿನ್ನಾರಾಧನೆ ಮಾಡಿಸೋ ಹರಿಯೇ ॥ ೩ ॥

ಸೌದಾಮಿನಿಯು ಭಕ್ತಿ ಪರವಶಳಾಗಿ ಪದವನ್ನು ಅನ್ನುತ್ತಿದ್ದಳು. ಅವಳ ಸ್ವರವು ಹುಟ್ಟಾ ಇಂಪಾಗಿತ್ತು. ಮೇಲಾಗಿ ದೇವರ ಮೇಲೆ ಅವಳ ಭಕ್ತಿಯು ಬಹಳ! ಅವಳಿಗೆ ದೇವರನ್ನು ಹೊಗಳುವಂಥ ಅಥವಾ ಧ್ಯಾನಿಸು ವಂಥ ಎಷ್ಟೋ ಸಾಧುಸಂತರು ಮಾಡಿದ ಪದಪದ್ಯಗಳೂ, ಅಷ್ಟಕ ಗಳೂ, ಕವಿತೆಗಳೂ ಬಾಯಿಪಾಠ ಬರುತ್ತಿದ್ದವು. ಈ ಕಾಲಕ್ಕೆ ಅವಳ ಸ್ಥಿತಿಯು ಬಹಳೇ ಕರುಣಾಜನಕವಾಗಿತ್ತು ಅಂತೇ ಅವಳು ಇಷ್ಟ ದೇವತೆಯನ್ನು ಸ್ತುತಿಸಹತ್ತಿದ್ದಳು. ಅವಳು ಅನ್ನುತ್ತಿದ್ದ ಪದವು ಮುಗಿ ಯಲಿಕ್ಕೂ ಇಬ್ಬರು ಗೃಹಸ್ಥರು ಅವರ ಮನೆಯೊಳಗೆ ಕಾಲಿಡಲಿಕ್ಕೂ ಒಮ್ಮೆಲೆ ಗಂಟುಬಿತ್ತು. ಎಂದೂ ನೋಡದೆ ಇದ್ದ ಗೃಹಸ್ಥರು ಮನೆಯಲ್ಲಿ ಬಂದದರಿಂದ, ಸೌದಾಮಿನಿಯು ಚಟ್ಟನೆ ಎದ್ದು, ಕೋಣೆಯ ಬಾಗಿಲ ಮರೆಗೆ ನಿಂತುಕೊಂಡು ಅಲ್ಲಿಂದಲೇ, 'ತಮಗೆ ಯಾರು ಬೇಕು? ತಾವು ಯಾರ ಕಡೆಗೆ ಬಂದಿರುವಿರಿ? ಎಂದು ಬಹು ನಮ್ರತನದಿಂದ ಆ ಹೊಸ ಗೃಹಸ್ಥರನ್ನು ಕುರಿತು ಪ್ರಶ್ನಮಾಡಿದಳು. ಆಗ ಆ ಗೃಹಸ್ಥರಲ್ಲಿ ಒಬ್ಬನು—ಕುಲಕರ್ಣಿ ಗೋವಿಂದರಾಯರು ಇದೇ ಮನೆಯಲ್ಲಿರುತ್ತಾರೋ? ಎಂದು ತಿರುಗಿ ಪ್ರಶ್ನಮಾಡಿದನು. ಅದಕ್ಕೆ........

ಸೌದಾ—ಹೌದು; ಅವರು ಇದೇ ಮನೆಯಲ್ಲಿರುತ್ತಾರೆ.

ಹೊಸ—ಮನೆಯಲ್ಲಿ ಹಿರಿಯರಾರಾದರು ಇರುತ್ತಾರೋ? ಅಥವಾ ನೀವೇ ಹಿರಿಯರೋ? ಗೋವಿಂದರಾಯರ ಕುಟುಂಬವು ಎಲ್ಲಿರುವದು?

ಸೌದಾ—ಅವ್ವನು ಇದೇ ಈಗ ಎಲ್ಲಿಯೋ ಹೊರಗೆ ಹೋಗಿರು ವಳು. ಈಗ ಬರುವಳು. ಅಲ್ಲಿಯವರೆಗೆ ಇಲ್ಲಿ ಕುಳಿತುಕೊಳ್ಳಬೇಕು.

ಎಂದು ನುಡಿದು, ಆ ಹೊಸ ಗೃಹಸ್ಥರಿಗೆ ಕೂಡುವದಕ್ಕಾಗಿ ಪಡಸಾಲೆ ಯಲ್ಲಿ ಒಂದು ಕಂಬಳಿಯನ್ನು ಹಾಸಿದಳು. ಆದರದಿಂದ ಹಾಸಿದ ಆ ಕಂಬಳಿಯಮೇಲೆ ಇಬ್ಬರೂ ಕುಳಿತುಕೊಂಡರು ಸೌದಾಮಿನಿಯು ಬಾಗಿಲು ಮರೆಗೆ ನಿಂತು ಅವರನ್ನು ನೋಡಹತ್ತಿದಳು. ಅವಳ ಮನಸ್ಸಿನಲ್ಲಿ ಬಗೆಬಗೆಯ ಕಲ್ಪನಾತರಂಗಗಳು ಉಂಟಾಗಹತ್ತಿದವು. ಒಂದು ಕ್ಷಣ ದಲ್ಲಿ—"ಇವರು ನಮ್ಮಪ್ಪನಿಗೆ ಸಾಲವನ್ನು ಕೊಟ್ಟ ಸಾವುಕಾರರಿರ ಬಹುದೋ? ನಾಲ್ಕಾರು ದಿವಸಗಳ ಕೆಳಗೆ ಅಪ್ಪನು ಅವ್ವನ ಬಳಿಯಲ್ಲಿ ಸಾಲದ ವಿಷಯವಾಗಿ ಮಾತಾಡುತ್ತಿದ್ದನು; ಹೀಗೆ." ಮತ್ತೊಂದು ಕ್ಷಣದಲ್ಲಿ—"ಇವರು ನನ್ನನ್ನು ನೋಡಲಿಕ್ಕೆ ಬಂದಿರಬಹುದೋ? ಹೀಗೆ." ವಿಷಮವಾದ ಕಲ್ಪನಾತರಂಗಗಳು ಅವಳನ್ನು ದಂಗುಬಡಿಸಿ ದವು. ಯಾವ ಮಾತಿನ ನಿಶ್ಚಯವೂ ಆಗಲೊಲ್ಲದು. ಅವ್ವನು ಯಾವಾಗ್ಗೆ ಬರುವಳು? ಮತ್ತು ಈ ಬಂದವರ ಉದ್ದೇಶವು ಯಾವಾಗ್ಗೆ ತಿಳಿಯು ವದು? ಎಂದು ಆಕೆಯ ಮನಸು ತಾಯಿಯ ಆಗಮನವನ್ನೇ ವಿಶೇಷ ವಾಗಿ ಬಯಸಹತ್ತಿತು. ಇತ್ತ ಪಡಸಾಲೆಯಲ್ಲಿ ಕುಳಿತ ಇಬ್ಬರು ಗೃಹ ಸ್ಥರಲ್ಲಿ ಆಂಗ್ಲಭಾಷೆಯೊಳಗೆ ಸಂಭಾಷಣವು ನಡೆದಿತ್ತು. ಅದನ್ನು ನಮ್ಮ ಕರ್ನಾಟಕ ವಾಚಕವರ್ಗಕ್ಕಾಗಿ ಕನ್ನಡದಲ್ಲಿ ಇದ್ದಕ್ಕಿದ್ದ ಹಾಗೆಯೇ ಭಾಷಾಂತರ ರೂಪದಿಂದ ಕೊಡುತ್ತೇವೆ.

ಕಮಲಾಕಾಂತ—"ಶಾಮಸುಂದರಾ, ಆ ದುರ್ದೈವಿಯಾದ ಗೋವಿಂದರಾಯರ ಮಗಳು ಇವಳೇ ಕಾಣುತ್ತಾಳೆ. ಇವಳ ಲಗ್ನದವಿಷಯ ದಲ್ಲಿಯೇ, ಅವರು ಪ್ರಯತ್ನಮಾಡಿ, ಎಲ್ಲಿಯೂ ಕೂಡಿಬಾರದ್ದರಿಂದ ಬೇಸತ್ತು, ಆತ್ಮಹತ್ಯೆಯನ್ನು ಮಾಡಿಕೊಂಡಿರಬೇಕು ಹರಹರ! ಎಂಥ ಶೋಚನೀಯ ಸ್ಥಿತಿಯಿದು? ಹುಡುಗಿಯನ್ನು ನಾವು ನೋಡಿದ್ದು ಇದೇ ಮೊದಲು! ಸ್ವರೂಪದಿಂದ ಹೇಗೆ ನಕ್ಷತ್ರದಂತೆ ಒಪ್ಪುತ್ತಿರುವಳು ಅವಳ ಮಿತವಾದ ಲಜ್ಜೆಯೂ ಧಾರಿಷ್ಟ್ಯವೂ ಅವಳ ಮರ್ಯಾದೆಯನ್ನು ಬೆಳಿಸುತ್ತಿ ರುವವು. ಇದೇ ಈಗ ಇವೇ ಗುಣಗಳ ಪರೀಕ್ಷೆಯಾಗಲಿಲ್ಲವೇ? ಏನು ಮಾಡಬೇಕು? ಇಂತಹ ಸುಂದರರತ್ನಗಳ ಪರೀಕ್ಷೆಯು ಇನ್ನೂ ನಮ್ಮ ಸಮಾಜಕ್ಕೆ ಆಗಲೊಲ್ಲದು."

ಶಾಮ—ಕಮಲಕಾಂತಾ, ನೀನು ಸರಿಯಾಗಿ ಮಾತಾಡಿದಿ. ನಮಗೆ 'ನೀವು ಯಾರಕಡೆಗೆ ಬಂದಿರುವಿರಿ? ಏನು ಕೆಲಸವದೆ?'' ಇವೇ ಮೊದಲಾದ ಪ್ರಶ್ನಗಳನ್ನು ಮರ್ಯಾದೆಯಿಂದ ಕೇಳಿ, ಕೂಡಲಿಕ್ಕೆ ಕಂಬಳಿಯನ್ನು ಹಾಸಿದಳು. ಇದರ ಮೇಲಿಂದ ಅವಳ ಸುಶಿಕ್ಷಿತತನದ ಕಲ್ಪನೆಯು ಸಹಜವಾಗಿ ಆಗುವಂತಿದೆ. ಮನೆಯಲ್ಲಿ ಯಾರೂ ಇಲ್ಲದಾಗ ಇಂತಹ ಹುಡುಗಿಯರ ಬಾಯಿಂದ ಉತ್ತರ ದೊರೆಯುವದೇ ದುರ್ಲಭವು! ಎಷ್ಟೋ ಹುಡುಗೆಯರು ನಾಚಿನಾಚಿ ಸಾಯುತ್ತಾರೆ. ಇರಲಿ, ಕಮಲಕಾಂತಾ, ಆ ದುಃಖದಾಯಕ ವರ್ತಮಾನವನ್ನು ನೀನೇ ಅವರ ಕಿವಿಯ ಮೇಲೆ ಹಾಕು.

ಕಮ—ಅದೇಕೆ? ನೀನೇ ಅಷ್ಟು ಕೆಲಸವನ್ನು ಮಾಡಬಾರದೇ?

ಶಾಮ—ಊಂ ಹೂ. ನೀನೇ ಆ ಕೆಲಸವನ್ನು ಮಾಡು.

ಹೀಗೆ ಆ ಇಬ್ಬರು ಗೃಹಸ್ಥರು ಮಾತಾಡುತ್ತಿರುವಷ್ಟರಲ್ಲಿ ರಾಧಾಬಾಯಿಯವರು ತಿರುಗಿ ಒಬ್ಬರೇ ಮನೆಗೆ ಬಂದರು. ಅವರ ಮೋರೆಯು ಬಾಡಿ ಚಿಂತೆಯಿಂದ ಕಪ್ಪಗಾಗಿತ್ತು. ಅವರ ಎದೆಯೊಡೆದು ನೀರಾಗಿತ್ತು. ಸಾರಾಂಶ, ಸದ್ಯಕ್ಕೆ ಚಿಂತೆಯೇ ಅವಳ ಗೆಳತಿಯಾಗಿದ್ದಳು. ಗಂಡನು ಎಲ್ಲಿ ಹೋಗಿರಬಹುದು? ಅವನ ಅವಸ್ಥೆಯು ಏನಾಗಿರಬಹುದು? ಇವೇ ಮೊದಲಾದ ಪತಿಯ ಸಂಬಂಧದ ವಿಚಾರಗಳಲ್ಲಿ ಸಿಕ್ಕು ಅವರು ಮಗ್ನಾಗಿರಬೇಕು; ಯಾಕೆಂದರೆ ಅವರು ಮನೆಯನ್ನು ಸೇರಿದಾಗ ಪಡಸಾಲೆಯಲ್ಲಿ ಕುಳಿತ ಇಬ್ಬರು ಗೃಹಸ್ಥರು ಸಹ ಅವರಿಗೆ ಕಾಣಿಸಲಿಲ್ಲ. ಅವರನ್ನು ಮಾತಾಡಿಸದೆ, ರಾಧಾಬಾಯಿಯವರು ನೆಟ್ಟಗೆ ನಡುಮನೆಗೆ ಹೋದರು. ಆಗ ಸೌದಾಮಿನಿಯು ತಾಯಿಯನ್ನು ಕುರಿತು -ಅವ್ವಾ ಅಪ್ಪನ ಸುದ್ದಿಯೇನಾದರು ತಿಳಿಯಿತೇ? ಹೊರಗೆ ಪಡಸಾಲೆಯಲ್ಲಿ ಯಾರೋ ಇಬ್ಬರು ಗೃಹಸ್ಥರು ಬಂದು ಕುಳಿತಿರುವರು. ಮತ್ತು ಅವರು ನಿನ್ನ ಹಾದಿಯನ್ನೇ ನೋಡುತ್ತಿರುವರು. ಅವರು ಇಲ್ಲಿಗೆ ಬಂದು ಬಹಳ ಹೊತ್ತಾಯಿತು. ಎಂದು ಹೇಳಿದಳು.

ರಾಧಾ—ಬಂದಿದ್ದಾರಾದೀತು, ಆ ಸಾವುಕಾರರು! ನಮ್ಮದೇ ನಮಗೆ ಸಾಕಾಗಿರುವದು! ನಮ್ಮ ಇಂತಹ ಸ್ಥಿತಿಯಲ್ಲಿ ಅವರು ಏನು ಬೊಳಕೊಳ್ಳುತ್ತಾರೆ?

ಸೌದಾ—ಅಪ್ಪಾ, ಅವರ ಈವರೆಗಿನ ವರ್ತನದ ಮೇಲಿಂದ ಅವರು ಸಾವುಕಾರರಿದ್ದಂತೆ ನನಗಂತೂ ತೋರುವದಿಲ್ಲ. ಬೇರೆ ಯಾರಾದರು ಇರಬಹುದು! ಎಂದು ನುಡಿಯಲು, ರಾಧಾಬಾಯಿಯವರು ಎದ್ದು, ಬಾಗಿಲಮರೆಗೆನಿಂತು, 'ತಮ್ಮದೇನು ಕೆಲಸವದೆ.' ಎಂದು, ಆ ಗೃಹಸ್ಥರನ್ನು ಕುರಿತು ಪ್ರಶ್ನಮಾಡಿದರು ಆಗ ಅಯ್ಯೋ, ಎಂಥ ಕಠಿಣ ಪ್ರಸಂಗವಿದು? ಇನ್ನು ಈ ವರ್ತಮಾನವನ್ನು ಕೇಳಿದ ಕೂಡಲೆ ಅವರ ಸ್ಥಿತಿಯು ಏನಾಗಬಹುದು? ನಾರಾಯಣಾ, ಈ ಅಬಲೆಯರಿಗೆ ಎಂಥ ಹೊತ್ತು ತಂದಿ? ಹೇಳಪ್ಪಾ, ನೀನೇ ಹೇಳು. ನನ್ನ ಎದೆಯಾಗುವದಿಲ್ಲ. ಎಂದು ಆ ಇಬ್ಬರಲ್ಲಿ ಒಬ್ಬನು ಇಂಗ್ಲಿಷದಲ್ಲಿ ಮತ್ತೊಬ್ಬನಿಗೆ ಹೇಳಿದನು. ಕೂಡಲೆ ಮತ್ತೊಬ್ಬನು, ಆ ಬಡಕುಟುಂಬದ ಮೇಲೆ ಬಂದ ದುಃಖದ ಪ್ರಸಂಗವನ್ನು ಹೇಳಹತ್ತಿದನು:—

"ಬಾಯಿಯವರೇ, ನಿನ್ನೆ ಸಾಯಂಕಾಲದಲ್ಲಿ ನಾವಿಬ್ಬರು ತಿರುಗಾಡಲಿಕ್ಕೆಂದು ಸಂಗಮದ ಮೇಲೆ ಹೋಗಿದ್ದೆವು. ಆಗ ಯಾರೋ ಒಬ್ಬರು ಸಂಗಮದಲ್ಲಿ ಧುಮುಕಿ ಆತ್ಮಹತ್ಯೆಯನ್ನು ಮಾಡಿಕೊಂಡರು. ಇವು ಅರಿವೆಗಳು. ಇದು, ಅವರು ಬರೆದಿಟ್ಟ ಪತ್ರವು. ಈ ಪತ್ರದ ಮೇಲಿಂದಲೇ ನಮಗೆ ಆತ್ಮಹತ್ಯೆಯನ್ನು ಮಾಡಿಕೊಂಡವರ ಹೆಸರು ತಿಳಿಯಿತು. ಅವರ ಹೆಸರು ಗೋವಿಂದರಾವ ಕುಲಕರ್ಣಿ ನಿಮ್ಮ ಸೌಭಾಗ್ಯ-ದೀಪವು ನೊಂದಿತು. ನಿಮ್ಮ ಮಂಗಲಸೂತ್ರದ ಆಧಾರವು ಇಲ್ಲದಂತಾಯಿತು.

ದೇವಾ, ನನ್ನ ಮೇಲೆ ಎಂಥ ಹೊತ್ತು ತಂದಿ? ಇನ್ನು ನಾನು ಏನು ಮಾಡಲಿ? ಸೌದಾಮಿನಿ, ಹಾಳಾಯಿತು, ನನ್ನ ಬಾಳುವೆಯು ಪೂರಾ ಹಾಳಾಯಿತು! ಉರಿಹಚ್ಚು ಆ ನನ್ನ ದುರ್ದೈವಕ್ಕೆ ಎಂದು ನುಡಿದು ರಾಧಾಬಾಯಿಯವರು ಕೆಲವು ಕಾಲ ಎಚ್ಚರ ತಪ್ಪಿಬಿದ್ದುಕೊಂಡರು. ಆಗ ಏನುಮಾಡಬೇಕೆಂಬುದು ಸೌದಾಮಿನಿಗೆ ತೋಚದಂತಾಯಿತು. ಅವಳು ತಂದೆಯ ದುರ್ಮರಣವನ್ನು ಕೇಳಿ ದುಃಖದಿಂದ ಹುಚ್ಚಾಗಿ ದೊಡ್ಡ ದನಿ-ತೆಗೆದು ಅಳಹತ್ತಿದಳು. ಅತ್ತು ಅತ್ತು ಅವಳ ಕಣ್ಣುಗಳು ಕೆಂಪಾದವು. ಅಷ್ಟರಲ್ಲಿ ನೆರೆಹೊರೆಯ ಹೆಂಗಸರೂ ಅಲ್ಲಿ ಕೂಡಿದರು. ಒಬ್ಬರ ದುಃಖವನ್ನು ನೋಡಿ ಮತ್ತೊಬ್ಬರಿಗೂ ದುಃಖವಾಗುತ್ತದೆ. ಅನ್ಯರು ಅಳುವದನ್ನು ನೋಡಿ ನಾವೂ ಅಳುತ್ತೇವೆ.

ಇದರಂತೆ ಅಲ್ಲಿಯವರ ಸ್ಥಿತಿಯಾಯಿತು. ಅಲ್ಲಿ ಕೂಡಿದವರು ರಾಧಾಬಾಯಿ ಯವರನ್ನು ಎಚ್ಚರಗೊಳಿಸಿ, ಅವರಿಗೆ ನಾಲ್ಕು ಸಮಾಧಾನದ ಮಾತು ಹೇಳುವದೊತ್ತಟ್ಟಿಗುಳಿದು, ಅವರೂ ದನಿತೆಗೆದು ಅಳಹತ್ತಿದರು. ಅಷ್ಟರಲ್ಲಿ ರಾಧಾಬಾಯಿಯವರು ಮೂರ್ಛೆ ತಿಳಿದೆದ್ದು ದುಃಖಮಾಡಹತ್ತಿದರು ಪಾಪ! ಆ ಬಡಕುಟುಂಬದ ಆಧಾರವು ಇಲ್ಲದಂತಾಗಿ, ದುಃಖಾಗ್ನಿಯು ಅವರನ್ನು ಹುರಪಳಿಸಹತ್ತಿತು. ಚಿಕ್ಕವಳಾದ ಸುಮನೆಗೆ ಏನು ತಿಳಿಯ ಬೇಕು? ಅವಳು ನೆರೆಮನೆಯಿಂದ ಮನೆಗೆ ಬಂದು ಮನೆಯಲ್ಲಿ ನಡೆದ ಗದ್ದಲ ವನ್ನು ನೋಡಿ ತಾಯಿಯನ್ನು ಅಪ್ಪಿಕೊಂಡು—ಅಮ್ಮಾ, ನೀನು ಏಕೆ ಅಳುತ್ತಿ? ಅಪ್ಪನು ಇನ್ನೂ ಬರಲಿಲ್ಲವಲ್ಲ ಎಂದು ಕೇಳಿದಳು. ಆ ಹುಡುಗೆಯ ಈ ಪ್ರಶ್ನವು ತೀರ ಸಾದಾ ಇದ್ದರೂ ಅದನ್ನು ಕೇಳಿದ ಕೂಡಲೇ ರಾಧಾಬಾಯಿ ಯವರ ದುಃಖಕ್ಕೆ ನೆಲೆಯಿಲ್ಲದಂತಾಯಿತು. ಅವರ ಆ ಕಾಲದಲ್ಲಾದ ಕರುಣಾಜನಕವಾದ ಸ್ಥಿತಿಯನ್ನು ವರ್ಣಿಸುವ— ಸಾಮರ್ಥ್ಯವು ನಮ್ಮ ಲೆಕ್ಕಣಿಕೆಯಲ್ಲಿಲ್ಲ. ರಾಧಾಬಾಯಿಯ ದುಃಖೋದಧಿಯು ಮೇರೆವಪ್ಪಿ ಹೊರಸೂಸಹತ್ತಿದ್ದರಿಂದಲೂ, ಅವರು ಯಾರ ಮಾತನ್ನೂ ಕೇಳಿಕೊಳ್ಳುವ ಸ್ಥಿತಿಯಲ್ಲಿಲ್ಲದ್ದರಿಂದಲೂ ಪಡಸಾಲೆಯಲ್ಲಿ ಇದು ವರೆಗೆ ಖಿನ್ನಮನಸಿನಿಂದ ಕುಳಿತುಕೊಂಡ ಇಬ್ಬರು ಗೃಹಸ್ಥರು ಸೌದಾಮಿನಿಯನ್ನು ಹೊರಗೆ ಕರೆದು- ಇದು ಹೆಚ್ಚಿಗೆ ಮಾತಾಡುವ ಸಮಯವಲ್ಲ. ಈಗ ನಾವು ಹೋಗುತ್ತೇವೆ. ಇನ್ನು ಎರಡು ತಿಂಗಳುಗಳ ಮೇಲೆ ಬರುವೆವು; ಎಂದು ಹೇಳಿ, ಅವಳ ಕೈಯಲ್ಲಿ ಒಂದು ಕಾಗದದ ಪಾಕೀಟನ್ನು ಕೊಟ್ಟು ಅಲ್ಲಿಂದ ಹೊರಬಿದ್ದರು. ವಾಚಕರೇ, ಪತಿಯ ಮರಣ ಶೋಕವೆಂದರೆ ಸಣ್ಣದಲ್ಲ. ಅದರ ವರ್ಣನೆ ಯನ್ನು ಯಾರು ಮಾಡಬೇಕು? ಗೋವಿಂದರಾಯರ ಚಿಂತೆಯು ಕೊನೆಯು ಈ ಪ್ರಕಾರ ದುಃಖದಲ್ಲಾಯಿತು. ಈಶೇಚ್ಛೆಗೆ ಉಪಾಯವಿಲ್ಲ.

---

# ೯ ನೆಯ ಪ್ರಕರಣ.



## ಕಠಿಣ ಪ್ರಸಂಗ

ಕಾಲಕ್ಕೇನು? ಅದು ಒಂದೇಸವನೇ ನಡೆದಿರುವದು. ದಿವಸಗಳ ಹಿಂದೆ ದಿವಸಗಳೂ, ತಿಂಗಳುಗಳ ಹಿಂದೆ ತಿಂಗಳುಗಳೂ ವರ್ಷಗಳ ಹಿಂದೆ ವರ್ಷಗಳೂ ಈ ಪ್ರಕಾರ ಕಾಲಗಣನೆಯು ನಡದೇ ಇರುವದು. ಇವುಗಳ ಹಿಂದೆ ಎಷ್ಟು ಕಾಲವು ಗತಿಸಿತೆಂಬದನ್ನು ಯಾರೂ ಹೇಳಲಾರರು. ಒಂದುಮುರುಕ ಗುಡಿಸಲಿನಲ್ಲಿ ಒಬ್ಬ ಬಡವನು ಸತ್ತಿರಲಿ, ಇಲ್ಲವೆ ಒಂದು ದೊಡ್ಡ ಅರಮನೆಯಲ್ಲಿ ಒಬ್ಬ ಹೆಸರಾದ ಅರಸನು ಸತ್ತಿರಲಿ. ಇವೆರಡು ಸಂಗತಿಗಳು ಕಾಲಕ್ಕೆ ಸರಿಯಾಗಿಯೇ ತೋರುವವು. ಬೇಕಾದವರು ಪುತ್ರನಿಗಾಗಿ ಶೋಕಮಾಡಲಿ ಹೆಂಡತಿಗಾಗಿ ಕಣ್ಣೀರು ಸುರಿಸಲಿ; ಅಕ್ಕತಂಗಿಯರು, ಅಣ್ಣತಮ್ಮಂದಿರು, ತಾಯಿತಂದೆಗಳು ಮೊದಲಾದವರ ಸಲುವಾಗಿ ದುಃಖಮಾಡಲಿ; ಸ್ತ್ರೀಯರು ಪತಿಗೋಸುಗ ಅತ್ತು ಆಕಾಂತ ಮಾಡಲಿ; ಆದರ ಅರವು ಕಾಲಕ್ಕಿರುವದಿಲ್ಲ. ಅದು ಅವ್ಯಾಹತವಾಗಿ ನಡದೇ ಇರುವದು. ಸಾಧುಸಂತರು, ಅರಸರು, ಹೆಸರಾದ ಕವಿಗಳು, ಸೇನಾಪತಿಗಳು, ಪಂಡಿತರು, ಗ್ರಂಥಕಾರರು ಇವರಲ್ಲಿ ಬೇಕಾದವರು ಸತ್ತರೂ ಕಾಲಕ್ಕೆ ಕರುಣೆ ಬರುವದಿಲ್ಲ! ಆದರ ಗತಿಯು ಕುಂಠಿತವಾಗುವದಿಲ್ಲ!! ಮನುಷ್ಯನಾದರೂ ಈ ಕಾಲದ ಅನುಕರಣವನ್ನೇ ಮಾಡಿರುವನು. ಜಗತ್ತಿನಲ್ಲಿ ಅವನಂಥ ನೀಚ ಪ್ರಾಣಿಯು ಬೇರೆ ಯಾವದೂ ಇರಲಿಕ್ಕಿಲ್ಲ. ನೋಡಿರಿ; ಅವನು ಯಾವ ತನ್ನ ಕೈಗಳಿಂದ ತನ್ನ ಮುದ್ದು ಮಗನನ್ನು ಆಡಿಸುತ್ತಾನೋ, ಅವನನ್ನು ಚಪ್ಪರಿಸುತ್ತಾನೋ, ಅವನಿಗೆ ಊಟಕ್ಕೆ ಹಾಕಿರುತ್ತಾನೋ, ಅವೇ ಕೈಗಳಿಂದ ಪ್ರಸಂಗವಿಶೇಷದಲ್ಲಿ ಅವನ ಶರೀರದ ಮೇಲೆ ಬೆಂಕಿಯನ್ನಿಡಲಿಕ್ಕೆ ಹಿಂದೆಮುಂದೆ ನೋಡುವದಿಲ್ಲ. ಆತನು ಸತ್ತವರಬಗ್ಗೆ ಎಷ್ಟು ದಿವಸಶೋಕ ಮಾಡುವನು? ಎಷ್ಟು ದಿವಸ ಉಪವಾಸ ಬೀಳುವನು? ಕೆಲವು ತಾಸು; ಬಹಳಾದರೆ ಕೆಲವು ದಿವಸಗಳ ವರೆಗೆ ಮಾತ್ರ! ಆ ಮೇಲೆ ಮತ್ತೆ ಮೊದಲಿನಂತೆ!! ಇಂಥಿಂಥವರು ಸತ್ತರೆಂದು ತಿಳಿದು, ಯಾರಾದರೂ ತಮ್ಮ ತಮ್ಮ

ವ್ಯವಹಾರಗಳನ್ನು ಪೂರಾಬಿಟ್ಟುಕುಳಿತಿರುವರೋ? ಇದರಂತೆಯೇ ಜಗತ್ತಿನ ಸ್ಥಿತಿಯು ಇರುತ್ತಿರಲು, ನಮ್ಮ ರಾಧಾಬಾಯಿಯವರು ಇದಕ್ಕೆ ಹೇಗೆ ಅಪವಾದವಾಗುವರು? ಅವರೇನು ಜಗತ್ತು ಬಿಟ್ಟು ಇರುವರೋ? ಅವರೂ ಜಗತ್ತಿನ ನಿಯಮಗಳಿಗೆ ಒಳಗಾದವರೇ. ಗೋವಿಂದರಾಯರು ಆತ್ಮಹತ್ಯೆಯನ್ನು ಮಾಡಿಕೊಂಡು ಇಂದಿಗೆ ತಿಂಗಳಾಯಿತು. ಈ ಅವಧಿಯಲ್ಲಿ ರಾಧಾಬಾಯಿಯವರ ಶೋಕಸಮುದ್ರಕ್ಕೆ ಇಳತ ಹತ್ತಿ, ಅದು ಮೂಲ-ಸ್ಥಾನಕ್ಕೆ ಬಂದಿತ್ತು. ಅವರು ಒಂದು ತಿಂಗಳವರೆಗೆ ಮನೆಯಲ್ಲಿ ಇದ್ದದ್ದನ್ನೆಲ್ಲ ಮಾರಿ ತಮ್ಮ ನಿರ್ವಾಹವನ್ನು ಸಾಗಿಸುತ್ತ ಬಂದಿದ್ದರು. ಇನ್ನು ಮುಂದೆ ಹೊಟ್ಟೆಯನ್ನು ಹೇಗೆ ಸಾಗಿಸಬೇಕೆಂಬ ಪ್ರಶ್ನವು ಈಗ ಅವರ ಮುಂದೆ ಆ ಎಂದು ಬಾಯಿ ತೆರೆದು ನಿಂತುಕೊಂಡಿತ್ತು. ಬರಬರುತ್ತ ಅವರು ಒಂದೊಂದು ದಿವಸ ಉಪವಾಸ ಬೀಳಹತ್ತಿದ್ದರು. ಅವರು ತಮಗೆ ಏನಾದರು ದೊರೆತರೆ, ಅದನ್ನು ತಮ್ಮ ಹುಡಿಗೆಯರಿಗೆ ಕೊಟ್ಟು, ತಾವು ತೀರ ಉಪವಾಸದಿಂದ ಇರಹತ್ತಿದರು. ಇದೇ ಕ್ರಮವು ಕೆಲವು ದಿವಸಗಳವರೆಗೆ ಸಾಗಿತು; ಆದರೆ ಹೀಗೆಯೇ ಎಷ್ಟು ದಿವಸಗಳವರೆಗೆ ಸಾಗುವದು?

ಅರಿ–ಕಂದ.

**ಹೊಟ್ಟೆಯ ಚಿಂತೆಯು ದೊಡ್ಡದು ।**
**ಹೊಟ್ಟೆಯು ಹಸಿದಾಗ ನರಗೆ ತೋಚದು ಕಾರ್ಯ ॥**

ಎಂದು ಒಬ್ಬ ಆಧುನಿಕ ಕವಿಯು ವರ್ಣಿಸಿರುವನು. ಅದೇನು ಸಟೆಯಲ್ಲ! ರಾಧಾ ಬಾಯಿಯವರು ಈಗ ಅದೇ ಓಣಿಯೊಳಗಿನ ಒಬ್ಬ ವಕೀಲರ ಮನೆಯಲ್ಲಿ ಕೆಲಸ ಬೊಗಸೆಗಳನ್ನು ಮಾಡಿ, ತಮ್ಮ ಉಪಜೀವಿಕೆಯನ್ನು ಸಾಗಿಸಹತ್ತಿದ್ದರು.

ಒಂದು ದಿವಸ ರಾಧಾಬಾಯಿಯವರು ವಕೀಲರ ಮನೆಯೊಳಗಿನ ಕೆಲಸ ಬೊಗಸೆಗಳನ್ನು ತೀರಿಸಿಕೊಂಡು ಅದೇ ಬಂದು ಪಡಸಾಲೆಯಲ್ಲಿ ಸೌದಾಮಿನಿಯೊಡನೆ ಮಾತಾಡುತ್ತ ಕುಳಿತುಕೊಂಡಿದ್ದರು. ಸುಮನೆಯು ನೆರಮನೆಗೆ ಆಡಲಿಕ್ಕೆ ಹೋಗಿದ್ದಳು. ಈಗ ಮಾತಾಡುವ ಸರತಿಯು ಸೌದಾಮಿನಿಯ ಕಡೆಗೆ ಬಂದಿತ್ತು.

ಸೌದಾ—ಅವ್ವಾ, ನಮ್ಮ ಸಲುವಾಗಿ ನೀನು ಹೆರವರಲ್ಲಿ ದುಡಿಯ ಬೇಕು ನಾವು ಮಾತ್ರ ಮನೆಯಲ್ಲಿ ಸ್ವಸ್ಥವಾಗಿ ಕೂಳು ತಿನ್ನುತ್ತ ಕೂಡ ಬೇಕು! ಇದೇನು ನನ್ನ ಮನಸಿಗೆ ಬರುವದಿಲ್ಲ!

ರಾಧಾ—ಬಾಳಾ, ವೇಳೆ ಬಂದಂತೆ ನಡೆಯಲಿಕ್ಕೆ ಬೇಕು. ನಿನ್ನನ್ನು ಕೆಲಸಕ್ಕೆ ಹಚ್ಚಿ ನಾನು ಸುಮ್ಮನೆ ಕುಳಿತುಕೊಳ್ಳಲಿ? ಇಲ್ಲವ್ವಾ, ನಾನಿ ರುವ ತನಕ ನನ್ನ ಕೈಯಿಂದ ಇಂಥ ಕೆಲಸವು ಎಂದೆಂದಿಗೂ ಆಗಲಾರದು. ಇನ್ನೂ ನಿನ್ನ ಮದುವೆಯು ಆಗತಕ್ಕದ್ದದೆ. ಜನರು ನಿನ್ನನ್ನು ನೋಡ ಲಿಕ್ಕೆ ಬರತಕ್ಕವರು. ಇಂಥ ವೇಳೆಯಲ್ಲಿ ನಿನ್ನನ್ನು ಎರಡನೇಯವರಲ್ಲಿ ದುಡಿಯಲಿಕ್ಕೆ ಹಚ್ಚುವದು ಸರಿಯೇ!

ಸೌದಾ—" ಅವ್ವಾ ನಿಲ್ಲು; ಒಳ್ಳೇ ನೆನಪಾಯಿತು. ಆ ಹೊತ್ತು ನೀನು ಎಚ್ಚರದಪ್ಪಿಬಿದ್ದಾಗ ನಮ್ಮಲ್ಲಿ ಬಂದ ಗೃಹಸ್ಥರು ಹೋಗುವಾಗ ನನ್ನ ಕೈಯಲ್ಲಿ ಒಂದು ಪಾಕೀಟು ಕೊಟ್ಟು ಹೋಗಿರುವರು. ಇಷ್ಟು ದಿವಸ ಮರೆ ಮಾತಿಗೆ ಬಿದ್ದು ಅದನ್ನು ನೋಡುವದು ಹಾಗೇ ಉಳಿದಿತ್ತು. ಅದರಲ್ಲಿ ಏನು ಅದೆ, ನೋಡೋಣ." ಎಂದು ನುಡಿದು, ಸೌದಾಮಿನಿಯು ನಡು ಮನೆಯೊಳಗಿದ್ದ ಬಾಗಿಲು ಮಾಡಿನೊಳಗಿಂದ ಒಂದು ಪಾಕೀಟು ತಕ್ಕೊಂಡು ಬಂದು, ಅದನ್ನು ಹರಿದು ನೋಡಲು, ಅದರಲ್ಲಿ ಐವತ್ತು ರೂಪಾಯಿಗಳ ಐದು ನೋಟಗಳೂ ಒಂದು ಪುಟ್ಟಪತ್ರವೂ ಅವಳಿಗೆ ದೊರೆಯಿತು. ಅವು ಗಳನ್ನು ನೋಡಿ ತಾಯಿಮಕ್ಕಳು ಬೆರಗಾದರು. ಸೌದಾಮಿನಿಯು ತಾಯಿಯ ಅಪ್ಪಣೆಯಿಂದ ಪತ್ರವನ್ನು ಓದಹತ್ತಿದಳು ಅದರಲ್ಲಿ ' ಇದು ವಿಶೇಷವಾಗಿ ಹೇಳಕೇಳುವ ಹೊತ್ತಲ್ಲ. ಈ ನಮ್ಮ ಅಲ್ಪ ದ್ರವ್ಯವನ್ನು ಸ್ವೀಕರಿಸಬೇಕು. ನಾವು ಇನ್ನೆರಡು ತಿಂಗಳಿಗೆ ನಿಮಗೆ ಮತ್ತೆ ಭೆಟ್ಟಿಯಾಗು ವೆವು ಎಂದು ಬರೆದಿತ್ತು. ಪತ್ರವನ್ನೋದುವದು ಮುಗಿಯಲು, ಸೌದಾಮಿ ನಿಯು—ಅವ್ವಾ, ದೇವರಿಗೆ ಅನಾಥನಾಥನೆಂದು ಅನ್ನುತ್ತಾರೆ. ಅದೇನು ಸುಳ್ಳಲ್ಲ! ಆತನು, ನಮ್ಮ ಕನಸುಮನಸಿನಲ್ಲಿಲ್ಲದಲೇ ನಮಗೆ ಇಂಥ ಕಠಿಣ ಪ್ರಸಂಗದಲ್ಲಿ ಆ ಗೃಹಸ್ಥರ ಕೈಯಿಂದ ಈ ಇಪ್ಪತ್ತೈದು ರೂಪಾಯಿಗಳನ್ನು ಕೊಡಿಸಿದನು. ಇನ್ನು ಮೇಲೆ ನೀನು ಮುಂದಿಯ ಮನೆಯಲ್ಲಿ ದುಡಿಯಬೇಡ.

ಇಷ್ಟು ರೂಪಾಯಿಗಳಲ್ಲಿಯೇ ಒಂದೆರಡು ತಿಂಗಳಗಳವರೆಗೆ ಹೇಗಾದರೂ ಮಾಡಿ ಸಾಗಿಸೋಣ ಆ ಮೇಲೆ-

ರಾಧಾ—ಆ ಮೇಲೆ ಏನು? ಈ ಪತ್ರದ ಮೇಲಿಂದ ಆ ಗೃಹಸ್ಥರು ಮತ್ತೆ ಬಂದು ಏನಾದರೂ ಕೊಡುವರೆಂದು ತಿಳಿದುಕೊಂಡಿರುವಿಯಾ?

ಸೌದಾ—ಅವ್ವಾ, ಮುಂದೆ ಹಿಗೆಯೇ ಆದೀತೆಂದು ಯಾರು ಹೇಳ ಬೇಕು? ಶ್ರೀಕೃಷ್ಣ ಪರಮಾತ್ಮನ ಮನಸ್ಸಿನಲ್ಲಿ ಬಂದರೆ ಏನು ತಡ? ಕ್ಷಣದಲ್ಲಿ ಬಡವನು ಒಡೆಯನಾಗಬಹುದು; ಅನಾಥನು ಸನಾಥನಾಗಬಹುದು; ತಿಪ್ಪೆಯು ಉಪ್ಪರಿಗೆಯಾಗಬಹುದು!

ರಾಧಾ—ನೀನು ಅನ್ನುವದೇನೂ ಸುಳ್ಳಲ್ಲ; ಆದರೆ ಶ್ರೀಕೃಷ್ಣ ಪರಮಾತ್ಮನ ಮನಸಿನಲ್ಲಿ ಬಂದಾಗ ಇದೆಲ್ಲ ಆಗತಕ್ಕದ್ದಲ್ಲವೇ?

ಇಷ್ಟರ ಮೇಲೆ ಸೌದಾಮಿನಿಯು ಏನೋ ಮಾತಾಡತಕ್ಕವಳಿದ್ದಳು. ಅಷ್ಟರಲ್ಲಿ ಗೋವಿಂದರಾಯರ ಸಾವುಕಾರನಾದ ಹಿರಾಲಾಲನೂ ಅವರ ಪುರೋಹಿತರಾದ ಹಯಗ್ರೀವಾಚಾರ್ಯರೂ ಅಲ್ಲಿಗೆ ಬಂದರು ಆಗ ಸೌದಾಮಿನಿಯೂ ರಾಧಾಬಾಯಿಯವರೂ ನಡುಮನೆಯೊಳಗೆ ಹೋಗಿ ಬಾಗಿಲಮರೆಗೆ ನಿಂತು ಕೊಂಡರು; ಹಾಗು ರಾಧಾಬಾಯಿಯವರೂ ಅಲ್ಲಿಂದಲೇ—"ಆ ಕಂಬಳಿಯಮೇಲೆ ಕುಳಿತುಕೊಳ್ಳಿರಿ;' ಎಂದು ನುಡಿದು' ಆಚಾರ್ಯರನ್ನು ಕುರಿತು—' ಹಾದೀ ತಪ್ಪಿ ಯಾಕೆಬರೋಣವಾಯಿತು. ಎಂದು ಪ್ರಶ್ನೆ ಮಾಡಿದರು.

ಹಯ—ಸುಮ್ಮನೆ ಬಂದೆ! ನಿಮ್ಮ ಮೇಲೆ ಬಹಳ ಕಠಿಣ ಪ್ರಸಂಗವು ಬಂತು. ಉಪಾಯವಿಲ್ಲ ( ಕಣ್ಣಿಗೆ ಶರಗುಹಚ್ಚುತ್ತಾನೆ. ) ಗೋವಿಂದ ರಾಯರು ಬಹಳ ಒಳ್ಳೆಯವರು; ವ್ಯವಹಾರದಕ್ಷರು ಆದರೆ ಮಾಡತಕ್ಕದ್ದೇನು? ಅವರಿದ್ದಾಗಿನ ಮಾತು ಬೇರೆಯಿತ್ತು. ಇನ್ನು ಈ ಹಿರಾಲಾಲರ ಸಾಲದ ಗತಿಯೇನು ? ನೀವೇನು ಅಂಜಬೇಡಿರಿ! ಏನಾದರು ಮಾಡಿ ತೀರಿಸೋಣವಂತೆ ! ನೆರೆಹೊರೆಯವರು ನೆರವಾಗದಿದ್ದರೆ, ಮತ್ತಾರು ನೆರವಾಗಬೇಕು ? ಇಷ್ಟು ದಿವಸಗಳವರೆಗೆ ನಾನು ಬೇನೆಯಿಂದ ಹಾಸಿಗೆಯನ್ನು ಹಿಡಿದಿದ್ದೆ; ಆದರಿಂದ ನಿಮ್ಮ ಭೆಟ್ಟಿಗೆ ಬರೋಣವಾಗಲಿಲ್ಲ.

ರಾಧಾ— ಈಗ ನಮಗೆ ತಿನ್ನಲಿಕ್ಕೆ ಕೂಳು ಇಲ್ಲ. ಹೊಟ್ಟೆ ತುಂಬ

ಬೇಕಾದರೆ, ಕಣ್ಣೀರು ಕವಾಳಕ್ಕೆ ಬರುತ್ತವೆ. ಏನಾದರು ಮಾಡಿ ಸಾಲವನ್ನು ತೀರಿಸಿಕೊಳ್ಳಬೇಕೆಂದರೂ ಕಲವು ರೂಪಾಯಿಗಳನ್ನಾದರು ಕೊಡಲಿಕ್ಕೆ ಬೇಡವೇ? ಹಿರಾಲಾಲರು ನಮ್ಮಿಂದ ಏನೂ ತಕ್ಕೊಳ್ಳದೆ ಕಾಗದವನ್ನು ತಿರುಗಿ ಕೊಡುತ್ತಾರೋ?

ಹಿರ—ಅಪ್ಪಾ, ಏನ ಮಾತಾಡತಿ ಯಾಡ್ನೂರರುಪ್ಯೆ ಗಂಟಾ, ಐವತ್ತಾರುಪೆ ಬಡ್ಡಿ ಹೀಂಗ ಯಾಡನೂರಐವತ್ತರುಪೆ ಕೊಡಾಕಬೇಕ ಇದ ರಾಗ ಒಂದಪೈ ಕಡಿಮಿ ತಗೋಳಿಲ್ಲ. ಕಡಿಮಿ ತಗೋಳಾಕನವಮ್ಮ ಅವಾನ ಗಂಟಾ?

ರಾಧಾ— ಪುರೋಹಿತರೇ, ಹಿರಾಲಾಲರ ಮಾತುಗಳನ್ನು ಕೇಳಿದಿರಾ? ಹೀಗಾಯಿತೆಂದರೆ. ಸಾಲವು ಹೇಗೆ ತೀರಬೇಕು? ನಮ್ಮ ಹತ್ತರ ವಿಷತಂದು ತಿನ್ನಬೇಕೆಂದರೂ ಒಂದು ದುಡ್ಡು ಇಲ್ಲ.

ಹಯ— ಗೋವಿಂದರಾಯರು ಮನೆಯಲ್ಲಿ ಮನದಣಿ ಹಣದೊರಕಿಸುವ ಸಾಧನವನ್ನು ಇಟ್ಟಿದ್ದು, ನೀವು ದುಡ್ಡಿಲ್ಲ. ದುಡ್ಡಿಲ್ಲ ಎಂದ್ಯಾಕೆ ಅನ್ನುತ್ತೀರಿ?

ರಾಧಾ— ಪುರೋಹಿತರೇ, ನೀವು ಏನನ್ನುತ್ತಿರುವಿರಿ? ನಿಮ್ಮ ಮಾತುಗಳೇ ತಿಳಿಯಲೊಲ್ಲವು. ಆದ್ದರಿಂದ ತಿಳಿಯುವಂತೆ ಮಾತಾಡಿರಿ. ದುಡ್ಡು ದೊರೆಕಿಸುವ ಸಾಧನವು ನನ್ನ ಬಳಿಯಲ್ಲಿದ್ದು, ಅದು ನನಗೆ ಹೇಗೆ ಗೊತ್ತಾಗಲೊಲ್ಲದು?

ಹಯ—ರಾಧಕ್ಕಾ, ಆ ಸಾಧನವನ್ನು ನಿಮಗೆ ಹಿಂದುಗಡೆಯಲ್ಲಿ ಹೇಳುತ್ತೇನೆ. ಮೊದಲು ಈ ಹಿರಾಲಾಲರನ್ನು ಕಳಿಸಿ ಕೊಡೋಣ (ಹಿರಾಲಾಲನಿಗೆ) ಹಿರಾಲಾಲ, ನೀವು ಇನ್ನೊಂದು ತಿಂಗಳ ತಡೆಯಿರಿ. ಆ ಅವಧಿಯಲ್ಲಿ ನಿಮ್ಮ ಹಣವು ಮುಟ್ಟದಿದ್ದರೆ, ನಾನು ಸ್ವತಃ ನಿಮ್ಮ ಹಣವನ್ನೆಲ್ಲ ಕೊಡುತ್ತೇನೆ ನೀವು ಏನೂ ಚಿಂತೆಯನ್ನು ಮಾಡಬೇಡಿರಿ.

" ಖರೇಮಾತ ಕೊಡತಿ ಏನ! ಹಾಗಾದರೆ ನಾ ಹೋಗತಾವ " ಎಂದ್ಯು ನುಡಿದು ಹಿರಾಲಾಲನು ಅಲ್ಲಿಂದ ಹೊರಟುಹೋದನು ಬಳಿಕ ಹಯಗ್ರೀವಾಚಾರ್ಯರು, ರಾಧಾಬಾಯಿಯವರನ್ನು ಕುರಿತು-ರಾಧಕ್ಕಾ, ಈ ನಿಮ್ಮ

ಸೌದಾಮಿನಿಯ ಮದುವೆಯನ್ನು ಮಾಡುತ್ತೀರಾ? ನಮ್ಮ ಪರಿಚಯದ ಒಂದು ಉತ್ತಮವಾದ ಸ್ಥಳವಿರುವದು.

ರಾಧಾ—ಸ್ಥಳವಿರಬಹುದು. ಆದರೆ ಅದರಿಂದ ನಮಗೇನು ಉಪಯೋಗವು? ನಾವು ಬಡವರು.

ಹಯ—ವರದಕ್ಷಿಣೆಯ ಚಿಂತೆಯನ್ನು ಬಿಟ್ಟುಬಿಡಿರಿ. ಅವರು ಒಂದು ಕಾಸು ಸಹ ವರದಕ್ಷಿಣೆಯನ್ನು ತಕ್ಕೊಳ್ಳದೆ, ಎರಡೂ ಕಡೆಯ ವೆಚ್ಚವನ್ನು ತಾವೇ ಮಾಡಿ, ಮದುವೆಯನ್ನು ಮಾಡಿಕೊಳ್ಳತಕ್ಕವರಿದ್ದಾರೆ.

ರಾಧಾ—ವರದಕ್ಷಿಣೆಯನ್ನು ತಕ್ಕೊಳ್ಳದೆ, ಎರಡೂ ಕಡೆಯ ವೆಚ್ಚವನ್ನು ತಾವೇ ಮಾಡಿಕೊಂಡು ಮದುವೆಯನ್ನು ಮಾಡಿಕೊಳ್ಳಬೇಕಾದರೆ ವರನಿಗೆ ಹೆಚ್ಚು ವಯಸ್ಸಾಗಿರಬೇಕು. ಅಥವಾ ಅವನಲ್ಲಿ ಬೇರೆ ಏನಾದರೂ ಕುಂದು ಇರಲಿಕ್ಕೆಬೇಕು.

ಹಯ—ಛೇ ರಾಧಕ್ಕಾ; ಕುಂದು ಇಲ್ಲಾ. ಮತ್ತು ವಯಸ್ಸಾದರೂ ಅಷ್ಟೇನು ಬಹಳ ಆಗಿಲ್ಲ. ನಾನೇ ನಿಮ್ಮ ಸೌದಾಮಿನಿಯ ಹೆಸರನ್ನು ಸೂಚಿಸಿ, ಅವರನ್ನು ಒಡಂಬಡಿಸಿದೇನೆ. ಬೇಕಾದರೆ ಒಪ್ಪಿಕೊಳ್ಳಿರಿ. ಅಥವಾ ಬಿಟ್ಟುಬಿಡಿರಿ ನೀವು ಒಪ್ಪಿಕೊಂಡರೆ, ನಿಮ್ಮ ಜನ್ಮದ ಕಲ್ಯಾಣವಾಗುವದು. ನಮಗೆ ಬರೇ ಎರಡು ದಿವಸ ಸವಿಯೂಟ, ಬಹಳವಾದರೆ ರೂಪಾಯಿ ದಕ್ಷಿಣೆ?

ರಾಧಾ—ಮದುವೆಯಂಥ ಬಳಿಕ ವರನ ಊರು ಯಾವದು! ಹೆಸರೇನು? ವಯಸ್ಸೆಷ್ಟು? ಮನೆಯಲ್ಲಿ ಯಾರು ಯಾರು ಇರುವರು? ಉತ್ಪನ್ನವು ಎಷ್ಟಿರುವದು? ಇವೆಲ್ಲ ಸಂಗತಿಗಳು ತಿಳಿಯಲಿಕ್ಕೆ ಬೇಕು.

ಹಯ-[ನಾಶಿಯನ್ನು ಸೇದುತ್ತ] ಹೌದು. ಅವುಗಳನ್ನು ತಿಳಕೊಳ್ಳಲಿಕ್ಕೇಬೇಕು. ರಾಧಕ್ಕಾ, ನಿಮ್ಮ ಹತ್ತರೇನು ಮುಚ್ಚಿಡತಕ್ಕದ್ದು ಅದೆ. ಶನಿವಾರಪೇಟೆಯಲ್ಲಿ ಗುರುನಾಥರಾಯರೆಂಬವರೊಬ್ಬ ಇನಾಮದಾರರಿರುವರು. ಹತ್ತು ಸಾವಿರ ಹುಟ್ಟುವಳಿಯಿರುವದು. ಅವರ ಕುಟುಂಬವು ತೀರಿಕೊಂಡು ಆರು ತಿಂಗಳುಗಳಾದವು. ಅವರಿಗೆ ಒಬ್ಬ ಮಗನಿರುವನು.[ ತಲೆಯನ್ನು ತುರಿಸಿಕೊಳ್ಳುತ್ತ] ವಯಸ್ಸು ಸರಾಸರಿ ಐವತ್ತು ಐವತ್ತೆರಡು ಇರಬಹುದು. ವಯಸ್ಸಿಗೂ ಮದುವೆಗೂ ಏನೂ ಸಂಬಂಧವಿಲ್ಲ. ಅವರಿಗೆ ನಿಮ್ಮ ಸೌದಾ

ಮುದಿಯನ್ನು ಕೊಟ್ಟರೆ, ಅವಳ ಜನ್ಮದ ಕಲ್ಯಾಣವಾಗಿ ನಿಮ್ಮ ಬಡತನ ಹಿಂಗುವದು ಮುದುಕರ ಸಂಸಾರಗಳು ಮುಂದೆಬರುವದಿಲ್ಲವೆ! ಹರೆಯದ ವರನ್ನು ಮಾಡಿಕೊಂಡ ಎಷ್ಟೋ ಹುಡಿಗೆಯರು ವಿಧವೆಯರಾಗಿಲ್ಲವೇ? ಹರೆಯದವರಾದರೂ ಇಲ್ಲ. ಮುದುಕರೂ ಇಲ್ಲ. ಇವೆಲ್ಲ ಸಂಗತಿಗಳು ದೈವವನ್ನು ಅವಲಂಬಿಸಿರುವವು. ಹುಡುಗೆಯ ಹಣೆಯ ಬರಹದಲ್ಲಿ ಬ್ರಹ್ಮನು ವೈಧವ್ಯವನ್ನು ಬರೆದಿದ್ದರೆ, ಅವಳನ್ನು ತರುಣನಿಗೆ ಕೊಟ್ಟರೆ, ಅದು ತಪ್ಪುವದೋ? ಅದರಂತೆ ದೈವದಲ್ಲಿ ಸೌಭಾಗ್ಯವಿದ್ದರೆ ಅವಳನ್ನು ಮುದುಕನಿಗೆ ಕೊಟ್ಟರೂ ಅವಳು ಸೌಭಾಗ್ಯಸುಖವನ್ನು ಅನುಭವಿಸತಕ್ಕವಳೇ. ರಾಧಕ್ಕಾ, ನನ್ನ ಮಾತಿಗೆ ಒಪ್ಪಿಕೊಂಡರೆ, ನಿಶ್ಚಯದಿಂದ ನಿಮ್ಮ ಕಲ್ಯಾಣವಾಗುವದು.?

ರಾಧಾ- ಹ, ಹ, ಒಟ್ಟಿನ ಮೇಲೆ ನೀವು ಇದೇ ಕೆಲಸಕ್ಕೆ ಬಂದಂತೆ ತೋರುತ್ತದೆ. ನನಗೆ ಈಗ ನಿಮ್ಮ ಅಭಿಪ್ರಾಯವು ಚನ್ನಾಗಿ ಗೊತ್ತಾಯಿತು. ತಿಳಿದೂ ತಿಳಿದೂ ಮುಳ್ಳಿನೊಳಗಿಂದ ಹಾಯ್ದು ಮುಳ್ಳುಗಳನ್ನು ತುಳಿದು ದೈವಕ್ಕೂ, ದೇವರಿಗೂ ಹೆಸರಿಡುತ್ತ ಕೂಡುವದು ಸರಿಯೇ!

"ಈ ಬ್ರಹ್ಮಜ್ಞಾನದ ಮಾತುಗಳು ಒತ್ತಟ್ಟಿಗಿರಲಿ! ಗುರುನಾಥರಾಯರು, ಹಿರಾಲಾಲನ ಸಾಲವನ್ನು ತೀರಿಸುತ್ತೇವೆಂದೂ, ನಿಮಗೂ ನೂರೈನೂರು ರೂಪಾಯಿಗಳನ್ನು ಕೊಡುತ್ತೇವೆಂದೂ ಹೇಳಿರುವರು. ಇಷ್ಟರಮೇಲೆ ನಿಮ್ಮ ಮನಸ್ಸಿಗೆ ಬಂದಂತೆ ಮಾಡಿರಿ. ಅದಕ್ಕೆ ನಮ್ಮದೇನೂ ಪ್ರತಿಬಂಧವಿಲ್ಲ. ನಾಳೆ ಹಿರಾಲಾಲನು ಫಿರ್ಯಾದಿಯನ್ನು ಮಾಡಿದನೆಂದರೆ, ನಿಮಗೆ ತಿಳಿದೀತು? ನಿಮಗೆ ಹಿತವಾಗಬೇಕೆಂದು ನಾನು ಎಲ್ಲ ವ್ಯವಸ್ಥೆಯನ್ನು ಮಾಡಿಕೊಂಡು ಬಂದಿದ್ದೆನು. ಅದು ನಿಮ್ಮ ಮನಸಿಗೆ ಬಂದಂತೆ ತೋರುವದಿಲ್ಲ. ನೆಟ್ಟಗೆ ವಿಚಾರಮಾಡಿರಿ; ನಾನು ಇನ್ನೆರಡು ದಿವಸಗಳ ಮೇಲೆ ಬರುತ್ತೇನೆ. ಇಂಥ ಸುಸಂಧಿಯು ಮುಂದೆ ಎಂದೂ ಸಿಗಲಾರದು." ಎಂದು ನುಡಿದು, ಆಚಾರ್ಯರು ಹೊರಟು ಹೋದರು. ಅವರು ಹೋದ ಬಳಿಕ ಆ ತಾಯಿ-ಮಕ್ಕಳು ಎಷ್ಟೋ ವೇಳೆ ಹಾಗೆಯೇ ಮಾತಾಡುತ್ತ ಕುಳಿತುಕೊಂಡಿದ್ದರು. ರಾಧಾಬಾಯಿಯವ

ರಿಗೆ ಇದೊಂದು ಹೊಸ ಚಿಂತೆಯೇ ಉಂಟಾದಂತಾಯಿತು. ಇಂಥ ಕಠಿಣ-ಪ್ರಸಂಗದಲ್ಲಿ ಏನು ಮಾಡಬೇಕೆಂಬದು ಅವರಿಗೆ ತಿಳಿಯದಂತಾಯಿತು. ಇಷ್ಟರಲ್ಲಿ ಸಂಜೆಯಾದ್ದರಿಂದ ಅವರು ವಕೀಲರ ಮನೆಗೆ ತಮ್ಮ ಕೆಲಸಕ್ಕಾಗಿ ಹೊರಟುಹೋದರು. ಸೌದಾಮಿನಿಯು ಮನೆಗೆಲಸ ಮಾಡುವದರಲ್ಲಿ ತೊಡಗಿದಳು.

---

## ೧೦ನೆಯ ಪ್ರಕರಣ.

### ಪ್ರತಿಜ್ಞೆ.

ರಘುನಾಥರಾಯರ ಮನೆಯಲ್ಲಿ ಮದುವೆಯ ಸಿದ್ಧತೆಯು ಭರದಿಂದ ನಡೆದಿತ್ತು. ಅವರು ನಾಲ್ಕು ಸಾವಿರ ರೂಪಾಯಿ ವರದಕ್ಷಿಣೆ ಒಂದು ಸಾವಿರ ರೂಪಾಯಿ ಪರೋಪಚಾರ ಮತ್ತು ವೆಚ್ಚಿನ ಸಲುವಾಗಿ ಒಂದು ಸಾವಿರ ರೂಪಾಯಿ ಹೀಗೆ ಒಟ್ಟಿಗೆ ಆರು ಸಾವಿರ ರೂಪಾಯಿಗಳನ್ನು ತಕ್ಕೊಳ್ಳುವದು ಗೊತ್ತುಮಾಡಿ, ಕಮಲಾಕಾಂತನ ಮದುವೆಯ ನಿಶ್ಚಯವನ್ನು ಮಾಡಿದ್ದರು. ಹಾಗು ಮುಹೂರ್ತವನ್ನು ಗೊತ್ತುಮಾಡಿ, ಆ ಮುಹೂರ್ತಕ್ಕೆ ಬರಬೇಕೆಂದು ಕಮಲಾಕಾಂತನಿಗೆ ಪತ್ರವನ್ನು ಬರೆದಿದ್ದರು. ಮುಹೂರ್ತವು ಸಮೀಪಿಸಿದ್ದರಿಂದ ಬೀಗರಾದರೂ ಬಂದು ಎಲ್ಲ ಸಿದ್ಧತೆಯನ್ನು ನಡಿಸಿದ್ದರು.

ರಘುನಾಥರಾಯರು ಮಧ್ಯಾಹ್ನದ ವಾಮಕುಕ್ಷಿಯನ್ನು ತೀರಿಸಿಕೊಂಡು ಜಾನಕೀಬಾಯಿಯವರೊಡನೆ ಮಾತಾಡುತ್ತ ಕುಳಿತುಕೊಂಡಿದ್ದರು. ಅಷ್ಟರಲ್ಲಿ ಒಬ್ಬ ಟಪಾಲ ಶಿಪಾಯಿಯು ಬಂದು ಅವರ ಕೈಯಲ್ಲಿ ಒಂದು ಪತ್ರವನ್ನು ಕೊಟ್ಟು ಹೊರಟುಹೋದನು. ರಘುನಾಥರಾಯರು ಪತ್ರವನ್ನೋದಿ ಸಿಟ್ಟಿನಿಂದ ಅದರ ಕಡೆಗೆ ನೋಡುತ್ತ "ಇದು ನಮ್ಮ ಕಮಲಾಕಾಂತನ ಪತ್ರವೇ? ನನ್ನ ತಲೆ ತಿರುಗಿರುವದೋ ಅಥವಾ ಕಣ್ಣೊಳಗಿನ ಗುಡ್ಡೆಗಳು ತಿರುಗಿರುವವೋ? ಛೇ ಹಾಗೇನೂ ಆಗಿಲ್ಲಾ. ಇದು ಆ ಶತಮೂರ್ಖನ ಪತ್ರವೇ ಇರುವದು. ಪತ್ರದ ಕೆಳಭಾಗಕ್ಕೆ ಅವನ ಹೆಸರೇ ಇರುವದು. ಪತ್ರದಲ್ಲಿ— ನಾನು ಒಂದು ಸ್ತ್ರೈ

ಸಹ ಪರವಾನಿಗೆಯನ್ನು ತಕ್ಕೊಳ್ಳದೆ, ಹುಡುಗಿಯನ್ನು ಸ್ವತಃ ನೋಡಿ ಮದುವೆಯನ್ನು ಮಾಡಿಕೊಳ್ಳತಕ್ಕವನಿದ್ದೇನೆ. ಕಾರಣ ನನ್ನ ಹೇತುವಿಗೆ ವಿರುದ್ಧವಾಗಿ ಜೋಡಿಸಿ ತಂದ ಲಗ್ನವನ್ನು ಮುರಿದು ಬಿಡಿರಿ. ಎಂದು ಬರೆದಿರುವನು [ಔಪಕಚ್ಚಿ] ಮೂರ್ಖಾ, ನಿನ್ನ ಮನಸ್ಸಿನಲ್ಲಿ ಹೀಗೆ ಮಾಡತಕ್ಕದ್ದಿದ್ದರೆ, ನನಗೆ ಮೊದಲೇ ಏಕೆ ತಿಳಿಸಲಿಲ್ಲ? ಪ್ರತ್ಯಕ್ಷ ತಂದೆಯ ಅವಮಾನ! ಅದೂ ಮಗನ ಕೈಯಿಂದ. ಇನ್ನು ಆ ಹುಡುಗಿಯ ತಂದೆಗೆ ಏನೆಂದು ಹೇಳಲಿ? ಪೂರಾ ನಗೆಗೀಡಾಗುವ ಹೊತ್ತು ಬಂತು. ಇದೆಲ್ಲ ಆ ಕತ್ತೆಯ ಕಾಲೇಜ್ಲಿ'' ಎಂದು ನುಡಿದರು.

''ಇಷ್ಟು ಸಿಟ್ಟಿಗೇಳಲಿಕ್ಕೇನಾಯಿತು? ಕಮಲಾಕಾಂತನು ಪತ್ರದಲ್ಲಿ ಹೀಗೇನು ಬರೆದಿರುವನು?'' ಎಂದು ಜಾನಕಿಬಾಯಿಯವರು ಕೇಳಲು ರಘುನಾಥರಾಯರು ಬಹಳೇ ಕೋಪಗೊಂಡು— ಏನು ಬರೆದಿರುವನೆಂಬದನ್ನು ನೀನೇ ನೋಡಿಕೊಳ್ಳು.' ಎಂದು ಗದ್ದರಿಸಿ, ಪತ್ರವನ್ನು ಜಾನಕಿ ಬಾಯಿಯವರ ಮೈಮೇಲೆ ಚಲ್ಲಿದರು ಈ ಕಾಲಕ್ಕೆ ಅವರ ಕೋಪಾಟೋಪವು ವಿಶೇಷವಾಗಿತ್ತು. ಅವರ ತುಟಿಗಳು ನಡುಗಹತ್ತಿದವು. ಜಾನಕಿ ಬಾಯಿಯವರ ಒಗರು ರಘುನಾಥರಾಯರ ಮೇಲಿದ್ದರೂ, ಅವರು ಸಿಟ್ಟಿಗೆದ್ದರೆಂದರೆ, ಅವರ ಮುಂದೆ ಯಾರದೇನೂ ನಡೆಯುತ್ತಿದ್ದಿಲ್ಲ.

ಜಾನಕಿ— ಛೆ, ನನ್ನ ಕಮಲಾಕಾಂತನು ಹೀಗೆ ಎಂದೂ ಬರೆಯತಕ್ಕವನಲ್ಲ

ರಘು- ನಿನಗೆ ಹುಚ್ಚು ಹಿಡಿದಿರುವದು. ಈ ಪತ್ರವನ್ನು ಅವನೇ ಬರೆದಿರುವನು. ಪತ್ರದೊಳಗಿನ ಮಾತುಗಳು ಅವನ ಬಾಯಿಯಿಂದಲೇ ಹೊರಟಿರುವವು. ನನ್ನನ್ನು ಕೇಳದೆ ಮದುವೆಯನ್ನು ಯಾಕೆ ಗೊತ್ತು ಮಾಡಿದಿರೆಂದು ಬರೆಯುತ್ತಾನೆ. ಈ ಮಗನಿಗೇನು ಕೇಳತಕ್ಕದ್ದು? ನಮ್ಮ ಮದುವೆಗಳಾದವು. ನಮ್ಮ ಅಜ್ಜ-ಮುತ್ತಂದಿರ ಮದುವೆಗಳಾದವು. ಆದರೆ ಈ ಬಗೆಯನ್ನು ಮಾತ್ರ ಎಲ್ಲಿಯೂ ನೋಡಲಿಲ್ಲ. ಇಂಥ ಹುಡುಗರಿದ್ದರೇನು ಫಲವು? ನಾಳೆ ನಮ್ಮ ಮುಪ್ಪಿನಲ್ಲಿ ನಮ್ಮ ಮೀಸೆಗೆ ಉಳ್ಳೀಗಡ್ಡಿಗಳನ್ನು ಕಟ್ಟಲಿಕ್ಕೆ ಇವರೇನು ಹಿಂಜರಿವವರಲ್ಲ! ಇನ್ನು ಮೇಲೆ ಇವನು ಸ್ವಯಂವರದ ಪದ್ಧತಿಯನ್ನು ಬಳಕೆಯಲ್ಲಿ ತರಬೇಕೆನ್ನುತ್ತಾನೆ.

ಇಂಥ ಮೂರ್ಖಾಮೂರ್ಖರಾದ ಮಕ್ಕಳಿರುವದಕ್ಕಿಂತ ಅವರು ಸತ್ತರೆ ನೆಟ್ಟ-ಗಾಗುವದು ! ನಾನಂತೂ ನನ್ನ ಮಾನಹಾನಿಯನ್ನು ಮಾಡಿದ ಮಗನ ಮೋರೆಯನ್ನು ನೋಡಲಾರೆ! ಇದೇ ನನ್ನ ಪ್ರತಿಜ್ಞೆಯು ! !

ಜಾನ— ಹೀಗೆ ಸಿಟ್ಟಿಗೆದ್ದರೆ ಗತಿಯೇನು? ತಾವು ಅವನಿಗೆ ಚನ್ನಾಗಿ ಬುದ್ಧಿ ಬರುವಂಥ ಒಂದು ಪತ್ರವನ್ನು ಬರೆಯಿರಿ. ಅವನು ಇನ್ನೂ ಸಣ್ಣವನು, ಒಂದು ವೇಳೆ ತಿಳಿಯದೆ ಹುಡುಗಬುದ್ಧಿಯಿಂದ ಅಷ್ಟಿತಪ್ಪಿ ತಪ್ಪು ಮಾಡಿದ್ದರೆ, ಅದನ್ನು ಹೊಟ್ಟೆಯೊಳಗೆ ಹಾಕಿಕೊಳ್ಳುವವರು ನಾವೇ ಅಲ್ಲವೇ. ಇನ್ನೂ ಮದುವೆಗೆ ಎಂಟು ದಿವಸಗಳ ಅವಕಾಶವಿರುವದು. ಅಷ್ಟರಲ್ಲಿ ಪತ್ರವು ಮುಟ್ಟಿ ಉತ್ತರವಾದರೂ ಬರಬಹುದು. ಅಲ್ಲಿಯತನಕ ಬೀಗರಿಗೆ ಏನೂ ತಿಳಿಸಬಾರದು.

ರಘು—(ಸಿಟ್ಟಿನಿಂದ) ನೀನೂ ಆ ಕತ್ತೆಯಂತೆ ಅವಿವೇಕಿ ಇರುವಿಯೆಂಬದು ನನಗೆ ಈ ವರೆಗೂ ತಿಳಿದಿದ್ದಿಲ್ಲ. ಅವನಿಗೆ ತಿಳಿಯದೇನು ಮಾಡೀತು? ಅವನೇನು ಈಗ ಸಣ್ಣವನೋ? ನಾಳಿನ ವೈಶಾಖಕ್ಕೆ ಇಪ್ಪತ್ತೆರಡು ತುಂಬಿ ಇಪ್ಪತ್ತುಮೂರರಲ್ಲಿ ಬೀಳುವದು. ನಾನಂತು ಸರ್ವಥಾ ಆತನ ಮೋರೆಯನ್ನು ನೋಡಲಾರೆ? ಬೇಕಾದರೆ ನೀನೇ ಅವನಿಗೆ ಬುದ್ಧಿ ಹೇಳಲಿಕ್ಕೆ ಹೋಗು. ನಾನು ನಾಳೆ ಕಾಶಿಯಾತ್ರೆಗೆ ಹೊರಟು ಹೋಗುತ್ತೇನೆ.

ಜಾನ—(ಬಿಕ್ಕಿ ಬಿಕ್ಕಿ ಅಳುತ್ತ) ನನ್ನ ಮಾತುಗಳನ್ನಾದರೂ ಪೂರಾ ಕೇಳಿಕೊಳ್ಳಿರಿ. ಎಷ್ಟೋ ಹರಕೆಗಳನ್ನು ಹೊತ್ತಾಗ ಅವನು ನಮ್ಮ ಕಣ್ಣಿಗೆ ಬಿದ್ದಿರುವನು. ನಮ್ಮ ಗೋಪಾಲನನ್ನು ಅಲ್ಲಿಯ ವರೆಗೆ ಕಳಿಸಿಕೊಡಬೇಕು. ಅವನು ಆತನಿಗೆ ನಾಲ್ಕು ಬುದ್ಧಿಯ ಮಾತುಗಳನ್ನು ಹೇಳಿ ಅವನನ್ನು ಇಲ್ಲಿಗೆ ಕರಕೊಂಡು ಬರುವನು. ಅವನು ಬರುವ ವರೆಗೆ ಬೀಗರನ್ನು ಇಟ್ಟುಕೊಳ್ಳಬೇಕು.

ರಘು—ಬೀಗರಿಗೆ ಏನಾದರೊಂದು ನೆವವನ್ನು ಹೇಳಿ ಅವರನ್ನು ಇಟ್ಟುಕೊಳ್ಳುವದು ನನ್ನಿಂದಾಗದ ಮಾತು! ಇನ್ನು ಯಾತರ ಬೀಗರು ಯಾತರ ಬಿಜ್ಜರು? ಇಂದಿಗೆ ಅವನ ಪಾಲಿಗೆ ನಾನು ಸತ್ತೆನು. ನನ್ನ

ಪಾಲಿಗೆ ಆತನು ಸತ್ತನು. ಅಳು, ಅಳು, ಮಗನು ಸತ್ತನೆಂದು ಅಳು, ನಿನ್ನ ಅಳೋಣವನ್ನು ನೋಡಿ ನನ್ನ ಮನಸ್ಸು ಕರಗುವದೆಂದು ತಿಳಿದುಕೊಂಡಿರುವಿಯಾ! ಗೋಪಾಳಾ, ಏ ಗೊಪಾಳಾ!

'ಬಂದೆ; ಬಂದೆ, ಏನು ಕೆಲಸವದೆ?' ಎಂದು ಕೇಳುತ್ತ ಗೋಪಾಲನು ರಘುನಾಥರಾಯರ ಹತ್ತರ ಬಂದನು. ಆಗ ರಘುನಾಥರಾಯರು— ನೀನು ಈಗಲೇ ಬೀಗರ ಕಡೆಗೆ ಹೋಗಿ, ಇದೇ ಈಗ ಪುಣೆಯಿಂದ ಪತ್ರವು ಬಂತು. ಅದರಲ್ಲಿ ಚಿರಂಜೀವ ಕಮಲಾಕಾಂತನು ಸತ್ತನೆಂದು ಆತನು ಗೆಳೆಯನು ಬರೆದಿರುವನು. ನನಗೆ ಅವನೊಬ್ಬನೇ ಮಗನು. ಸತ್ತನು; ಈಶೇಚ್ಛೆಗೆ ಉಪಾಯವಿಲ್ಲ. ಇನ್ನು ನಿಮ್ಮ ಮಗಳನ್ನು ಯಾರಿಗಾದರೂ ಕೊಟ್ಟುಕೊಳ್ಳಿರಿ. ನಮ್ಮ ನಿಮ್ಮ ಋಣಾನುಬಂಧವು ಇದ್ದಿದ್ದಿಲ್ಲ.' ಎಂದು ಹೇಳಿ, ಅವರನ್ನು ಊರಿಗೆ ಕಳಿಸಿಕೊಟ್ಟು ಬಾ ಎಂದು ನುಡಿದರು. ಆಗ ಅವರ ಈ ಬಗೆಯ ಅನಪೇಕ್ಷಿತ ಮಾತುಗಳನ್ನು ಕೇಳಿ, ಗೋಪಾಲನು ಮೂಢನಾಗಿ, ತುಸು ಹೊತ್ತು ವಿಚಾರಮಾಡುತ್ತ ನಿಂತುಕೊಂಡನು. ಆಗ ರಘುನಾಥರಾಯರು—ಗೋಪಾಲಾ, ದೆವ್ವಬಡೆದಂತೆ ಹೀಗೇಕೆ ನಿಂತುಕೊಂಡಿ? ಆ ನೀಚನು ಸತ್ತನೆಂದು ಹೇಳಲಿಕ್ಕೆ ನಿನಗೆ ನಾಚಿಕೆ ಬರುತ್ತದೋ? ಹೋಗು ಹೀಗೆ ಮಿಕಿಮಿಕಿ ಮೋರೆಯನ್ನು ನೋಡುತ್ತ ನಿಲ್ಲಬೇಡ. ಎಂದು ಗದ್ದರಿಸಿದರು.

'ರಾಯರೇ, ಇಂಥ ಅಭದ್ರಸುದ್ದಿ........' ಎಂದು ಗೋಪಾಲನು ನುಡಿಯುವಷ್ಟರಲ್ಲಿ ರಘುನಾಥರಾಯರು ನಡುವೇ ಬಾಯಿಹಾಕಿ—ಅವನೇನು ಸತ್ತದ್ದು ಸಟಿಯೋ? ಹೇಳಿದಷ್ಟು ಕೆಲಸವನ್ನು ಮಾಡಿದರಾಯಿತು. ಅದರಲ್ಲಿ ನಿನ್ನದೇನು ಹೋಗುತ್ತದೆ? ಅವನು ಇಂದು ನನ್ನ ಪಾಲಿಗೆ ಸತ್ತನು! ಎಂದು ಅಂದರು.

ಈ ಕಾಲಕ್ಕೆ ಗೋಪಾಲನ ಸ್ಥಿತಿಯು ವಿಚಿತ್ರವಾದದ್ದರಲ್ಲಿ ಆಶ್ಚರ್ಯವೇನು? ಕಮಲಾಕಾಂತನು ಬದುಕಿದ್ದು ಸತ್ತನೆಂದು ಹೇಳಲಿಕ್ಕೆ ಆತನ ನಾಲಿಗೆಯಾದರೂ ಹೇಗೆ ಏಳಬೇಕು? ಹೇಳಬಾರದೆಂದರೆ, ಅವನ ಹೊಟ್ಟೆಯ ಮೇಲೆ ಕಾಲುಬರುತ್ತಿದ್ದವು. ಹೀಗಾಗಿ ಅವನಿಗೆ ಏನೂ ತಿಳಿ

ಯುವಂತಾಯಿತು. ಕೊನೆಗೆ ಅವನು ಯಜಮಾನರ ಮಾತಿಗೆ ಒಪ್ಪಿಕೊಂಡು ಅಲ್ಲಿಂದ ಹೊರಟು ಹೋಗಿ, ಅವರು ಹೇಳಿದಂತೆ ವ್ಯವಸ್ಥೆಯನ್ನು ಮಾಡಿದನು. ಅವನು ಹೋದ ಬಳಿಕ ರಘುನಾಥರಾಯರು ಜಾನಕಿಬಾಯಿಯವರನ್ನು ಕುರಿತು— ಇನ್ನು ಬೀಗರ ಕಡೆಯ ಕಿಟಿಕಿಟಿಯಂತೂ ಉಳಿಯಲಿಲ್ಲವಷ್ಟೇ? ನನ್ನ ಆಶೆಯೆಂಬ ಸಸಿಯು ಒಣಗಿಹೋಯಿತು. ನೂರಲ್ಲ, ಇನ್ನೂರಲ್ಲ, ನಾಲ್ಕಾರು ಸಾವಿರ ರೂಪಾಯಿ! ( ನಿಟ್ಟುಸಿರು ಬಿಟ್ಟು ) ಇನ್ನು ನನ್ನ ಬಾಳು ಏತರದು? ನನ್ನ ಸಂಸಾರದ ಸಮಾಪ್ತಿಯಾಯಿತು! ಇನ್ನು ನಾನು ತೀರ್ಥಯಾತ್ರೆಯನ್ನು ಮಾಡಿ, ಶರೀರದ ಸಾರ್ಥಕ್ಯವನ್ನಾದರೂ ಮಾಡಿಕೊಳ್ಳುತ್ತೇನೆ. ಒಳ್ಳೇ ನೆನಪು ಆಯಿತು. ಮೃತ್ಯುಪತ್ರವನ್ನೊಂದು ಮಾಡಿಡಲಿಕ್ಕೆ ಬೇಕು. ಅದರ ಮಸೂದೆಯನ್ನು ಹಾನಗಲ್ಲ ವಕೀಲರ ಕಡೆಯಿಂದ ಮಾಡಿಸಿಕೊಂಡು ಬರುತ್ತೇನೆ. ಎಂದು ಹೇಳಿ, ತಲೆಗೆ ರುಮಾಲವನ್ನು ಹಾಕಿಕೊಂಡು ಹೆಗಲ ಮೇಲೆ ಒಂದು ರೇಶ್ಮೆಯ ಅಂಚಿನ ಧೋತರವನ್ನು ಚಲ್ಲಿ ಕೈಯೊಳಗೆ ಬೆತ್ತವನ್ನು ತಕ್ಕೊಂಡು ಮನೆಯಿಂದ ಹೊರಬಿದ್ದರು.

ಜಾನಕಿಬಾಯಿಯವರ ಸ್ವಭಾವವು ಹೇಗೇ ಇರಲಿ; ಅವರು ಜನರಸಂಗಡ ಸೊಕ್ಕಿನಿಂದ ನಡೆಯಲಿ, ನಡೆಯದಿರಲಿ; ಜನರಿಗೆ ತಮ್ಮ ಡೌಲು ತೋರಿಸಲಿ, ತೋರಿಸದಿರಲಿ; ಅವರು ತಮ್ಮ ಮಗನಾದ ಕಮಲಾಕಾಂತನ ಸಂಗಡ ಮಾತ್ರ ಒಳ್ಳೇ ಪ್ರೀತಿಯಿಂದ ನಡಕೊಳ್ಳುತ್ತಿದ್ದರು. ಅವರು ಈ ವರೆಗೂ ಕಮಲಾಕಾಂತನನ್ನು ಹೂವಿನಂತೆ ಜೋಪಾನ ಮಾಡಿದ್ದರು. ಅವನಿಗೆ ಯಾವ ಮಾತಿನ ಕೊರತೆಯನ್ನೂ ತೋರಗೊಟ್ಟಿದ್ದಿಲ್ಲ. ಮಗನಿಗೆ ಸುಖವಾಗಬೇಕೆಂದು ಅವರು ಎಷ್ಟೋ ಸಂಗತಿಗಳನ್ನು ಗಂಡನಿಂದ ಮರೆಮಾಡುವರು. ಈ ಕೆಲಸದಲ್ಲಿ ಮಾತ್ರ ಬಹಳ ಮಾಡಿ ಎಲ್ಲ ಸ್ತ್ರೀಯರು ಪ್ರವೀಣರಿರುತ್ತಾರೆ. ಆದರೆ ಇದರ ದುಷ್ಪರಿಣಾಮದ ವಿಚಾರವು ಮಾತ್ರ ಅವರ ಮನಸ್ಸಿನಲ್ಲಿ ಬರುವದಿಲ್ಲ. ಮಗನ ದುಷ್ಕೃತ್ಯಗಳನ್ನು ಬಚ್ಚಿಟ್ಟು, ಅವನ ದುರ್ವರ್ತನದ ಸದ್ದು ಸಹ ಅನ್ಯರಿಗೆ ತಿಳಿಯಗೊಡದೆ, ಏನೇನೋ ಮಾಡಿ ಕೂಡಿಸಿಟ್ಟ ಹಣವನ್ನು ಆತನಿಗೆ ಕೊಟ್ಟು, ಆತನನ್ನು ಸುಖಿಯಾಗಿ ಮಾಡಲಿಕ್ಕೆ ಯಾವ ತಾಯಿಯು ಸಿದ್ಧಳಾಗುತ್ತಾಳೋ, ಅವಳು ನಿಜವಾದ

ತಾಯಿಯಲ್ಲ! ಮಗನನ್ನು ಮಣ್ಣುಮುಕ್ಕಿಸುವ ಮಾರಿಯೆಂದೇ ತಿಳಿಯ
ಬೇಕು. ತಾಯಿಯು ಮೇಲೆ ಹೇಳಿದ ಸಂಗತಿಗಳನ್ನು ಪುತ್ರವಾತ್ಸಲ್ಯದ
ಮೂಲಕ ಮಾಡುತ್ತಿರಬಹುದು; ಆದರೆ ಹೀಗೆ ಮಾಡುವದರಿಂದಲೇ,
ತಾನೇ ತನ್ನ ಮಗನ ಜನ್ಮದ ಹಾನಿಯನ್ನು ಮಾಡಲಿಕ್ಕೆ ಕಾರಣಳಾಗು
ತ್ತಾಳೆಂಬದು ಅವಳ ಲಕ್ಷ್ಯದಲ್ಲಿ ಬರುವದಿಲ್ಲ. ಇರಲಿ;

ನಮ್ಮ ಜಾನಕಿಬಾಯಿಯವರಾದರು ಇದೇ ಮಾದರಿಯ ಹೆಂಗಸ
ರಾಗಿದ್ದರು. ಆದರೆ ರಘುನಾಥರಾಯರ ಮುಂದೆ ಪ್ರಸಂಗವಿಶೇಷದಲ್ಲಿ
ಅವರದೇನೂ ನಡೆಯುತ್ತಿದ್ದಿಲ್ಲ. ರಘುನಾಥರಾಯರು ಹೆಂಡತಿಯ
ಎಷ್ಟೋ ಮಾತುಗಳನ್ನು ಕೇಳಿಕೊಳ್ಳುತ್ತಿದ್ದರು; ಅವರು ಆಶೆಯ ವಿರುದ್ಧ
ವಾಗಿ ಬಹಳ ಮಾಡಿ ನಡೆಯುತ್ತಿದ್ದಿಲ್ಲ. ಆದರೂ ಒಂದೊಂದು ಪ್ರಸಂಗ
ದಲ್ಲಿ ಅವರು ಯಾರ ಮಾತುಗಳನ್ನೂ ಕೇಳಿಕೊಳ್ಳುತ್ತಿದ್ದಿಲ್ಲ. ಅವರು
ತಮ್ಮ ಮನಸ್ಸಿನಲ್ಲಿದ್ದಂತೆಯೇ ಮಾಡುತ್ತಿದ್ದರು. ಅವರ ಈ ಬಗೆಯ
ಸ್ವಭಾವದಿಂದಲೇ ಕಮಲಾಕಾಂತನ ಶಿಕ್ಷಣವು ಇಲ್ಲಿಯವರೆಗೆ ಜರುಗಿತು.
ಇಲ್ಲದಿದ್ದರೆ, ಅವನು ನೊಣ ಜಾಡಿಸುತ್ತ ಮನೆಯಲ್ಲಿಯೇ ಕೂಡಬೇಕಾ
ಗುತ್ತು. ಮೊದಲು ಅವನನ್ನು ಪುಣೆಯಲ್ಲಿ ಕಲಿಯಲಿಕ್ಕಿಡುವ ಕಾಲಕ್ಕೆ
ಜಾನಕಿಬಾಯಿಯವರು ಬಹಳ ಪ್ರತಿಬಂಧವನ್ನುಂಟುಮಾಡಿದರು.
ರಘುನಾಥರಾಯರಿಗೆ ಅವರ ವಿರುದ್ಧವಾಗಿ ಎಷ್ಟೋ ಹಂಚಿಕೆಗಳನ್ನು
ಸೂಚಿಸಿದರು; ಆದರೆ ರಘುನಾಥರಾಯರು, ಅವರ ಯಾವ
ಮಾತನ್ನೂ ಲೆಕ್ಕಿಸದೆ, ಕಮಲಾಕಾಂತನನ್ನು ಕಲಿಯಲಿಕ್ಕೆ
ಪುಣೆಗೆ ಕಳಿಸಿಕೊಟ್ಟರು. ಅವರ ವರ್ತನವನ್ನು ಸೂಕ್ಷ್ಮರೀತಿ
ಯಿಂದ ಪರೀಕ್ಷಿಸುವವರಿಗೆ ಒಮ್ಮೆ—ಅವರು ಹೆಂಡತಿಯ ವಚನ
ದಂತೆ ನಡೆಯುವಂಥವರೆಂತಲೂ, ಮತ್ತೊಮ್ಮೆ—ಅವರು ತಮ್ಮ ಹೆಂಡತಿ
ಯನ್ನು ಬಹು ನಿಷ್ಠುರತನದಿಂದ ನಡಿಸಿಕೊಳ್ಳುವವರೆಂತಲೂ, ತೋರ
ಬಹುದು. ಈ ಪ್ರಕರಣವನ್ನು ಓದಿದ ವಾಚಕರಾದರೂ ೧ನೆಯಪ್ರಕರಣದ
ಲ್ಲಿಯ ರಘುನಾಥರಾಯರೂ ಇವರೂ ಒಂದೇ ಏನೆಂದು ನಮ್ಮನ್ನ ಕೇಳಬ
ಹುದು. ಆದರೆ ಅವರಿಗೆ ನಾವು 'ಅವರೇ ಇವರು' ಎಂದು ಖಂಡಿತವಾಗಿ
ಹೇಳುವೆವು!

---

# ೧೧ ನೆಯ ಪ್ರಕರಣ



## ಗುರುನಾಥರಾಯರ ವೃತ್ತಾಂತ.

ಗುರುನಾಥರಾಯರು ‡‡‡‡‡‡‡ ಗ್ರಾಮದ ಇನಾಮದಾರರು. ಅವರ ಸ್ವಭಾವವು ಸರಳ, ಅವರು ಇನಾಮದಾರರಾಗಿದ್ದರೂ ತಮ್ಮ ದೈವುಳ್ಳತನದ ಡೌಲನ್ನು ಒಂದೂ ದಿವಸ ತೋರಿಸಲಿಲ್ಲ. ಬಡವರಿಗೆ ಸಹಾಯ ಮಾಡುವದು. ಮನುಷ್ಯರ ಆದ್ಯಕರ್ತವ್ಯವೆಂದು ಅವರು ತಿಳಕೊಂಡು ಅದರಂತೆಯೇ ವರ್ತಿಸುತ್ತಿದ್ದರು. ಅವರ ಆಚರಣವಾದರೂ ಶುದ್ಧವಾಗಿತ್ತು. ಅವರಿಗೆ ಬೇಡಲಿಕ್ಕೆ ಬಂದವರು ವಿಮುಖರಾಗಿ ಎಂದೂ ಹೋಗುತ್ತಿದ್ದಿಲ್ಲ. ಬೇಕಾದಂಥ ಧನಸಂಚಯವು [ಫಂಡು) ಹೊರಡಲಿ, ಅದಕ್ಕೆ ಗುರುನಾಥರಾಯರ ಸಹಾಯವು ಅವಶ್ಯವಾಗಿ ಆಗುತ್ತಿತ್ತು. ಅನ್ನದಾನದಲ್ಲಂತೂ ಅವರು ಬಹಳೇ ಹೆಸರಾಗಿದ್ದರು. ಸದ್ಯದ ಕೆಲಕೆಲವು ಇನಾಮದಾರರಲ್ಲಿ ಕಂಡುಬರುವ ದಾಸ-ವಿನ್ಮುಖತೆಗೆ ಅವರ ಅಪವಾದದಂತಿದ್ದರು. ಅವರಲ್ಲಿ ಧನವು ವಿಪುಲವಾಗಿದ್ದರೂ ಅವರು ಒಂದು ದಿವಸ ಸಹ ಅಪ್ಪಿತಪ್ಪಿ ಪಾತರದವರ ಕಟ್ಟೆಯನ್ನು ಹತ್ತಿದ್ದಿಲ್ಲ. ಆದರೆ, ಈ ಆದರೆ ಶಬ್ದದಿಂದಲೇ ಅವರ ಕೀರ್ತಿಗೆ ಕಲಂಕ ಹತ್ತಿತ್ತು. ಅವರಲ್ಲಿ, ಮದುವೆಯ ಹುಚ್ಚು ಬಹಳ ಇತ್ತು. ಈ ವರೆಗೆ ಅವರ ನಾಲ್ಕು ಮದುವೆಗಳಾಗಿದ್ದವು. ಆದರೂ ಅವರ ಮದುವೆಯನ್ನು ಮಾಡಿಕೊಳ್ಳುವ ಇಚ್ಛೆಯು ಪ್ರಬಲವಾಗಿತ್ತು. ನಾಲ್ಕನೆಯ ಹೆಂಡತಿಯ ಹೊಟ್ಟೆಯಲ್ಲಿ ಗದಾಧರನೆಂಬೊಬ್ಬ ಮಗನಿದ್ದನು. ಈ ಗದಾಧರನು ಮಾತಾಪಿತೃಗಳಲ್ಲಿ ಒಳ್ಳೇ ಭಕ್ತಿಯುಳ್ಳವನಾಗಿದ್ದನು. ದಿನಾಲು ಅವನು ಪ್ರಾತಃಕಾಲದಲ್ಲಿ ತಾಯಿತಂದೆಗಳಿಗೆ ನಮಸ್ಕಾರವನ್ನು ಮಾಡಿದ ಹೊರತು ಯಾವ ಕೆಲಸ ವನ್ನೂ ಆರಂಭಿಸುತ್ತಿದ್ದಿಲ್ಲ. ಅವನು ತನ್ನ ಪೂಜ್ಯರಾದ ತಾಯಿತಂದೆ ಗಳ ಒಂದು ಭಾವಚಿತ್ರವನ್ನು [ ಫೋಟೋ ] ತೆಗಿಸಿ, ಅದನ್ನು ತನ್ನ ಹತ್ತರ ಇಟ್ಟುಕೊಳ್ಳುತ್ತಿದ್ದನು. ಪರವೂರಿಗೆ ಹೋದಾಗ ಪ್ರಾತಃ ಕಾಲದಲ್ಲಿ ಈ ಬಾವಚಿತ್ರಕ್ಕೇ ನಮಸ್ಕಾರಮಾಡಿ, ತನ್ನ ಕೆಲಸವನ್ನು

ಆರಂಭಿಸುತ್ತಿದ್ದನು ಈಗ ಆರು ತಿಂಗಳುಗಳಿಂದ ಅವನಿಗೆ ಯಾ
ವಾಗಲೂ ಚಿತ್ರದಲ್ಲಿರುವ ತಾಯಿಗೇ ನಮಸ್ಕಾರ ಮಾಡುವ ಹೊತ್ತು
ಬಂದಿತ್ತು. ಏಕೆಂದರೆ, ಅವನ ದೇಹಧಾರಿಯಾದ ತಾಯಿಯು ಪರಲೋಕ
ವನ್ನೈದಿದ್ದಳು. ತೃಷ್ಣಾರ್ಥಿಯು ಮೃಗಜಲದ ಬೆನ್ನು ಹತ್ತುವಂತೆ
ಗದಾಧರನು ಆ ಚಿತ್ರದೊಳಗಿನ ತಾಯಿಗೇ, 'ತಾಯಿ, ತಾಯಿ' ಎಂದು
ಸಂಭೋಧಿಸುತ್ತಿದ್ದನು. ಅವನಿಗೆ ಇಪ್ಪತ್ತೈದು ವರ್ಷಗಳಾಗಿದ್ದವು.
ಅವನು ಇದೇ ವರುಷ ಕಮಲಾಕಾಂತ ಮತ್ತು ಶಾಮಸುಂದರ ಇವ
ರೊಡನೆ ಬಿ.ಎ. ಪರೀಕ್ಷೆಗೆ ಕೂಡತಕ್ಕವನಿದ್ದನು. ಕಾಲೇಜದೊಳಗಿನ ವಿದ್ಯಾ
ರ್ಥಿಗಳಲ್ಲಿ ಈ ಮೂವರ ಸ್ನೇಹವು ಒಳ್ಳೇ ದೃಢವಾಗಿ ಕೂಡಿಕೊಂಡಿತ್ತು.
ಆದುದರಿಂದ ಅಧ್ಯಾಪಕರು ಈ ಮೂವರನ್ನು 'ತ್ರಿಮೂರ್ತಿಗಳು' ಎಂಬ
ಹೆಸರಿನಿಂದ ಸಂಬೋಧಿಸುತ್ತಿದ್ದರು. ಸೂಟಿಯ ದಿವಸಗಳಲ್ಲಿ ಈ ಮೂವರ
ವಾದವಿವಾದವು ಅನೇಕ ವಿಷಯಗಳ ಮೇಲೆ ಗುರುನಾಥರಾಯರ ಮನೆ
ಯಲ್ಲಿಯೇ ನಡೆಯುತಿತ್ತು. ಇವರ ಚರ್ಚೆಯ ವಿಷಯಗಳಲ್ಲಿ ವಿವಾಹ
ಸಂಬಂಧ ಚರ್ಚೆಯೇ ಉಳಿದಿತ್ತು. ಒಂದು ವೇಳೆ ಅವರು ಮದುವೆ
ಯನ್ನು ಮಾಡಿಕೊಂಡಿದ್ದರೆ, ಅವರ ಕೈಯನ್ನು ಯಾರೂ ಹಿಡಿಯುತ್ತಿ
ದ್ದಿಲ್ಲ. ಆದರೆ ಯಾವದೋ ಕಾರಣದಿಂದ ಅವರ ಆ ವಿಚಾರವು ಹಾಗೇ
ನಡೆದಿತ್ತು: ಇರಲಿ.

ಬಿ.ಎ. ಪರೀಕ್ಷೆಯ ದಿವಸಗಳು ಸಮೀಪಿಸಿದ್ದರಿಂದ ನಮ್ಮ ತ್ರಿಮೂರ್ತಿ
ಗಳು ಪರೀಕ್ಷೆಗಾಗಿ ಮುಂಬೈಗೆ ಹೋದವು. ಈ ಸಂಧಿಯನ್ನು ಸಾಧಿಸಿ
ಸ್ವಾರ್ಥಪರಾಯಣರೂ, ಗುರುನಾಥರಾಯರ ಸ್ವಭಾವದ ಪೂರ್ಣಪರಿಚಯು
ಳ್ಳವರೂ, ನಮ್ಮ ವಾಚಕ ವರ್ಗದ ಪರಿಚಯದವರೂ ಆದ ಹಯಗ್ರೀವಾ
ಚಾರ್ಯರು, ಗುರುನಾಥರಾಯರ ಮೇಲೆ ತಮ್ಮ ಸವಿಸವಿಯಾದ ಮಾತುಗ
ಳೆಂಬ ಮೋಹನಾಸ್ತ್ರವನ್ನು ಪ್ರಯೋಗಿಸಿ, ಪಂಚಮ ವಿವಾಹವನ್ನು ಮಾಡಿಕೊ
ಳ್ಳಬೇಕೆಂಬ ಅವರ ಮೊದಲಿನ ವಿಚಾರಕ್ಕೆ ಉತ್ತೇಜನವನ್ನು ಕೊಟ್ಟರು.
ವಿಶ್ವಾಮಿತ್ರ-ಪರಾಶರರಂಥ ಮಹಾಮುನಿಗಳು ಕೂಡ ಹೆಣ್ಣಿನ ಕಾಲಲ್ಲಿ
ಹಣ್ಣಾಗಿರುವರು; ಅಂದಮೇಲೆ ನಮ್ಮ ಗುರುನಾಥರಾಯರ ಪಾಡೇನು?
ಅವರ ಬಾಯಿಗೂ ನೀರು ಬಿಟ್ಟವು. ಅವರು ಆಚಾರ್ಯರ ಬಲೆಯಲ್ಲಿ

ಸಿಕ್ಕು ಮದುವೆಯನ್ನು ಮಾಡಿಕೊಳ್ಳಲಿಕ್ಕೆ ಸಿದ್ಧರಾದರು. ಈ ಮೊದಲೇ ಆಚಾರ್ಯರು ಗೋವಿಂದರಾಯರ ಮಗಳಾದ ಸೌದಾಮಿನಿಯನ್ನು ಗುರುನಾಥರಾಯರಿಗೆ ಕೊಡಿಸಬೇಕೆಂದು ಯೋಚಿಸಿ, ಅದಕ್ಕಾಗಿ ರಾಧಾಬಾಯಿಯವರನ್ನು ಒಡಂಬಡಿಸಬೇಕೆಂದು, ಹಿರಾಲಾಲನ ಸುದರ್ಶನವನ್ನು ಅವರ ಬೆನ್ನು ಹಚ್ಚಿ ಅವರನ್ನು ಹೇಗೆ ಇಕ್ಕಟ್ಟಿನಲ್ಲಿ ತಂದರೆಂಬ ಸಂಗತಿಯನ್ನು ವಾಚಕರು ಮರೆತಿರಲಿಕ್ಕಿಲ್ಲ. ಹಿರಾಲಾಲನು ಜಾತಿಯಿಂದ ಮಾರವಾಡಿಯು. ಅನಾಯಾಸವಾಗಿ ಆಚಾರ್ಯರ ಸಹಾಯದಿಂದ ಬರುವ ತನ್ನ ಹಣವನ್ನು ಮುಳುಗಿಸಿಕೊಂಡರೆ, ತನ್ನ ಜಾತಿಗೆ ಕುಂದುಬಂದೀತೆಂದು ತಿಳಿದು, ಅವನು ಆಚಾರ್ಯರ ಹೇಳಿಕೆಯಂತೆಯೇ ನಡೆಯಹತ್ತಿದ್ದನು. ಆಚಾರ್ಯರು ಮನಸಿನಲ್ಲಿ—'ನಾನು ಹಿಡಿದ ಕೆಲಸವು ಕೈಗೂಡಿದರೆ, ಗುರುನಾಥರಾಯರ ಕಡೆಯಿಂದ ಚನ್ನಾಗಿ ಲಾಭವಾಗುವದು.' ಎಂದು ತಿಳುಕೊಂಡು, ತಮ್ಮ ಹಳೇ ಪೆಟ್ಟಿಗೆಯನ್ನು ಒರಸಿ ಗಟ್ಟಿಮುಟ್ಟ ಮಾಡಿಸಿಟ್ಟಿದ್ದರು. ಸಾರಾಂಶ,ಅವರು ಮನೋರಾಜ್ಯದೊಳಗಿನ ಸಿಂಹಾಸನದ ಮೇಲೆ ಕುಳಿತು, ಕಲ್ಪನಾಸೃಷ್ಟಿಯಲ್ಲಿ ಸಂಚರಿಸಹತ್ತಿದ್ದರು. ಆದರೆ ವಿಧಾತೃವಿಗೆ ಅವರ ಕೃತಿಯು ಸರಿದೋರಲಿಲ್ಲೆಂಬಂತೆ ತೋರುತ್ತದೆ. ಯಾಕಂದರೆ, ಅವನು ಸೌದಾಮಿನಿಯ ಲಲಾಟರೇಖೆಯ ಸಾಮರ್ಥ್ಯದಿಂದ ಆಚಾರ್ಯರನ್ನು ಸಿಂಹಾಸನದಿಂದ ತಳ್ಳಿ, ಮಾನವೀ ಇಚ್ಛೆಯ ವಿರುದ್ಧವಾದ ಒಂದು ಅದೃಶ್ಯಶಕ್ತಿಯು ಇರುತ್ತದೆಂದು ಅವರ ನಿದರ್ಶನಕ್ಕೆ ತಂದುಕೊಟ್ಟನು. ರಾಧಾಬಾಯಿಯವರು ಆಚಾರ್ಯರ ಬಲೆಯಲ್ಲಿ ಸಿಗಲಿಲ್ಲ; ಹಾಗು ಹಿರಾಲಾಲನ ಉಪಟಳಕ್ಕೂ ಸೊಪ್ಪು ಹಾಕಲಿಲ್ಲ. ಆದ್ದರಿಂದ ಆಚಾರ್ಯರು ಉದಾಸೀನರಾಗಿ ಮತ್ತೊಂದು ಬೇಟೆಯನ್ನು ಹುಡುಕಹತ್ತಿದರು. ಅಷ್ಟರಲ್ಲಿ ನಮ್ಮ ತ್ರಿಮೂರ್ತಿಗಳು ತಮ್ಮ ತಮ್ಮ ಪರೀಕ್ಷೆಗಳನ್ನು ತೀರಿಸಿಕೊಂಡು ಪುಣೆಗೆ ಬಂದವು. ಆಗ ಅವರಿಗೆ ಗುರುನಾಥರಾಯರ ಹಾಗು ಆಚಾರ್ಯರ ಕಾರಸ್ಥಾನವೆಲ್ಲ ತಿಳಯಿತು. ಆಗ್ಗೆ ಅವರು ತಮ್ಮ ಅಮೂಲ್ಯವಾದ ಉಪದೇಶದಿಂದ ಗುರುನಾಥರಾಯರ ಮನಸ್ಸನ್ನು ವಿವಾಹವಿಚಾರದಿಂದ ತಿರುಗಿಸಿದರು; ಹಯಗ್ರೀವಾಚಾರ್ಯರ ಸ್ವಾರ್ಥ

ವೆಂಬ ಬ್ರಹ್ಮರಾಕ್ಷಸವನ್ನು ಹೊಡೆದೋಡಿಸಿದರು. ನಮ್ಮ ತ್ರಿಮೂರ್ತಿಗಳ ಉಪದೇಶವು ಬಹಳೇ ಯೋಗ್ಯವಾದದ್ದಿರುವದರಿಂದ, ನಮ್ಮ ವಾಚಕರಿಗಾಗಿ, ಅದರ ಸಾರಾಂಶವನ್ನು ಇಲ್ಲಿ ಕೊಡುತ್ತೇವೆ.

" ಪೂಜ್ಯರೇ, ತಾವು ಹಿರಿಯರಿರುವಿರಿ. ತಮಗೆ ಉಪದೇಶವಮಾಡುವ ಅಧಿಕಾರವು ನಮಗಿಲ್ಲ; ಆದರೂ ನಮ್ಮ ಮನಸ್ಸಿನಲ್ಲಿ ಬಂದ ವಿಚಾರಗಳನ್ನು ತಮ್ಮ ಮುಂದೆ ಇಡುತ್ತೇವೆ. ಅವು ತಮಗೆ ಸರಿದೋರಿದರೆ, ಅದರಂತೆ ನಡೆಯಬಹುದು. ಹಣ್ಣಿನ ರುಚಿಯು ಮಾಗಿದ ಹಣ್ಣಿನಲ್ಲಿ ಇರುವದಿಲ್ಲ. ಅದನ್ನು ಪ್ರೀತಿಯಿಂದ ಯಾರೂ ತಿನ್ನುವದಿಲ್ಲ; ಯಾಕಂದರೆ ಅದರೊಳಗಿನ ರಸವಲ್ಲ ಸೋರಿಹೋಗಿರುತ್ತದೆ! ಗಂಡಸರಂತೆ ಹೆಂಗಸರಿಗೂ ಒಳಿತು-ಹೀನಗಳ ಮತ್ತು ಸುಖ-ದುಃಖಗಳ ವಿಚಾರವಿರುತ್ತದೆ. ಬರೇ ಹಣವಿರುತ್ತದೆಂದು ಬೇಕುಬೇಕಾದ ಹಾಗೆ ಕುಣಿದಾಡಿದರೆ ಹೇಗೆ ಚಂದಕಾಣುವದು ? ದಿನಹೋದವರು ಮದುವೆಯ ಬಲೆಯಲ್ಲಿ ಬೀಳುವದು ತೀರ ಮೂರ್ಖತನವು! ಅವರ ಶರೀರದೊಳಗಿನ ಪ್ರತಿಯೊಂದು ಅವಯವಗಳು ಇನ್ನು ಮೇಲೆ ಮದುವೆಯ ಮಬ್ಬಿನಿಂದ ಉಬ್ಬಿ ಗೋಳಿಗೆ ಬೀಳುವದು ಸರಿಯಲ್ಲವೆಂದು ಸೂಚಿಸುತ್ತಿರುತ್ತವೆ. ಹಲ್ಲುಗಳು ತಮ್ಮ ಕೆಲಸಗಳೆಲ್ಲ ಮುಗಿದಿರುವವೆಂದು ಹೇಳುವವು; ನಡವು ಹಿತದ ಮಾತುಗಳನ್ನು ಹೇಳಿದವರಿಗೆ, ಎದುರುತ್ತರವನ್ನು ಕೊಡದೆ ನನ್ನಂತೆ ನಮ್ರರಾಗಿರಿ ಎಂದು ಸೂಚಿಸುವದು; ನರಗೂದಲುಗಳು, ವೈರಿಯ ಮೇಲಾದರ್ರು ಇಂಥ ವಯಸ್ಸಿನಲ್ಲಿ ಮದುವೆಯನ್ನು ಮಾಡಿಕೊಳ್ಳುವ ಪ್ರಸಂಗವು ಬರಬಾರದೆಂದು ಬೊಗಳುವವು. ಇವುಗಳಂತೆಯೇ ಉಳಿದ ಎಲ್ಲ ಅವಯವಗಳ ಸ್ಥಿತಿಯಿರುವದು ! ಇಂಥ ಅವಸ್ಥೆಯಲ್ಲಿ ಮದುವೆಯನ್ನು ಮಾಡಿಕೊಳ್ಳಲುದ್ಯುಕ್ತನಾದ ವರನಿಗೆ ಬಾಲಾಗುಂಡಾಡಿಸುವವರೂ ಮುಖಸ್ತುತಿಯನ್ನು ಮಾಡುವವರೂ ಗಂಟುಬಿದ್ದರೆ ತೀರೇ ಹೋಯಿತು. ಹಯಗ್ರೀವಾಚಾರ್ಯರೇ, ನೀವೇನು ಮನಸ್ಸಿಗೆ ಹಚ್ಚಿಕೊಳ್ಳುವ ಕಾರಣವಿಲ್ಲ! ನಿಮ್ಮಂಥವರ ಸವಿಸವಿ ಮಾತುಗಳಿಗೆ ವೃದ್ಧರು ಮನಸೋತು, ಬೇಕಾದಷ್ಟು ಹಣವನ್ನು ಹಾಳುಮಾಡುವದಕ್ಕೂ, ಮೋರೆಯು ನೀರಿಗೆಗಟ್ಟಿ,

ಆದರ ಮೇಲೆ ಹೆಣದ ಕಳೆಯುಂಟಾಗಿದ್ದರೂ ಅದನ್ನು ಲಕ್ಷಿಸದೆ, ತರುಣರಂತೆ ನಟಿಸಲಿಕ್ಕೂ ಸಿದ್ಧರಾಗುತ್ತಾರೆ. ಅಯ್ಯೋ, ಎಂಥ ಅಜ್ಞಾನಿಗಳಿವರು! ಇಂಥವರ ಅಜ್ಞಾನಕ್ಕೆ ಸುಜ್ಞರು ನಗದೆ ಇರಲಾರರು!!"

ಹೀಗೆ ಉಪದೇಶವಾದ ಬಳಿಕ ಶಾಮಸುಂದರನು ತನ್ನ ಇಂಪಾದ ಸ್ವರದಿಂದ ಕೆಳಗೆ ಬರೆದ ಪದವನ್ನು ಅಂದನು; ಆಗ ಗುರುನಾಥರಾಯರ ತಲೆಯಲ್ಲಿ ಪ್ರಕಾಶವು ಬಿತ್ತು; ಅವರ ಕಣ್ಣುಗಳು ತೆರೆದವು. ಅವರು ಮೃಗಮದದಿಂದ [ಕಸ್ತೂರಿಯಿಂದ] ಮೃತ್ತಿಕೆಯು ಸುವಾಸನೆಯುಳ್ಳದ್ದಾಗುವಂತೆ, ನಮ್ಮ ತ್ರಿಮೂರ್ತಿಗಳ ಪರಿಣಾಮಕಾರಕವಾದ ಉಪದೇಶದಿಂದ, ತಮ್ಮ ಮೊದಲಿನ ವಿಚಾರಗಳನ್ನು ಬದಿಗೊತ್ತಿ ಶೇಷಾಯುಷ್ಯವನ್ನು ಸಾರ್ವಜನಿಕ ಕಾರ್ಯಗಳನ್ನು ಮಾಡುವದರಲ್ಲಿ ಕಳೆಯಲಿಕ್ಕೆ ಸಿದ್ಧರಾದರು. ಹಯಗ್ರೀವಾಚಾರ್ಯರಾದರೂ ಪಶ್ಚಾತ್ತಾಪಪಟ್ಟು ಗುರುನಾಥರಾಯರಂತೆಯೇ, ಸಾರ್ವಜನಿಕ ಕಾರ್ಯಗಳನ್ನು ಮಾಡಲು ಒಪ್ಪಿಕೊಂಡರು.

ಶಾಮಸುಂದರನು ಅಂದಂಥ ಪದವು.

ಪದ

[ರಾಗ ಹಮೀರ, ತಾಲ ಆದಿ]

ಸರಿಯಲ್ಲದು ರೀತಿ । ಹಿರಿಯರೆ ॥ಪಲ್ಲ॥
ಹರೆಯದ ಹೆಂಡತಿ ಮುಪ್ಪಿನಲ್ಲಿ ಗಡ ।
ಮರಗಿಸುವಳಲ್ಲದೆ ಭೀತಿ ॥ ಅನುಪಲ್ಲ ॥
ಹಸಿದವಗಮೃತ ಹಸಿಬಿಸಿಯನ್ನವು ।
ಹಸಿಯದವನಿಗದು ತೋರ್ಪುದು ವಿಷವು ॥
ಸಸಿಮೊಗಚಲುವೆಯು ತರುಣಗೆ ಪ್ರಿಯವು ।
ಕಸಿವಿಸಿಗೊಳಿಪಳು ಮುದುಕನಿಗತಿ ॥ ೧ ॥

---

# ೧೨ ನೆಯ ಪ್ರಕರಣ

## ಈಶ್ವರೀಸೂತ್ರ.

ಸುಮಾರು ಎರಡು ಗಂಟೆಯಾಗಿತ್ತು. ರಾಧಾಬಾಯಿಯವರು, ಅದೇ ಊಟ-ಉಡಿಗೆಗಳನ್ನು ತೀರಿಸಿಕೊಂಡು ನಡುಮನೆಯಲ್ಲಿ ಹೂಬತ್ತಿಯ ಸಲುವಾಗಿ ಹತ್ತಿಯನ್ನು ನೆಟ್ಟಗೆ ಮಾಡುತ್ತ, ಸೌದಾಮಿನಿಯ ಮದುವೆಯ ವಿಷಯವಾಗಿಯೇ, ಅವಳೊಡನೆ ಮಾತಾಡುತ್ತ ಕುಳಿತುಕೊಂಡಿದ್ದರು. ಈಗ ಮಾತಾಡುವ ಸರತಿಯು ಸೌದಾಮಿನಿಯ ಕಡೆಗೆ ಬಂದಿತ್ತು.

ಸೌದಾ— ಅವ್ವಾ, ನೀನು ಹಯಗ್ರೀವಾಚಾರ್ಯರ ಮಾತಿಗೆ ಏಕೆ ಒಡಂಬಡುವದಿಲ್ಲ? ನಾಳೆ ಆ ಹಿರಾಲಾಲನು ಬಂದನೆಂದರೆ ಬಹಳ ಗೋಳು ಆದೀತು. ಕಾರಣ ನೀನು ಅನುಮಾನಿಸದೆ, ಆಚಾರ್ಯರ ಮಾತಿಗೆ ಒಪ್ಪಿಕೊಳ್ಳು. ಪರಮೇಶ್ವರನ ಮನಸ್ಸಿನಲ್ಲಿ ಆಚಾರ್ಯರ ಮನಸ್ಸಿನಲ್ಲಿಯೇ ಇದ್ದಂತೆ ಮಾಡತಕ್ಕದಿದ್ದರೆ, ಅದನ್ನು ತಪ್ಪಿಸುವವರಾರು?

ರಾಧಾ— ಸೌದಾಮಿನಿ, ನಾನು ಇಂಥ ಮಾತಿಗೆ ಎಂದೂ ಒಡಂಬಡಲಿಕ್ಕಿಲ್ಲ! ಹಿರಾಲಾಲನು ಬರಲಿ, ಬೇಕಾದವರು ಬರಲಿ ಯಾರು ಬಂದು ಏನು ಮಾಡುತ್ತಾರೆ? ದುಡ್ಡೆಂದರೆ ಹುಚ್ಚೆಂದು ತಿಳಿದಿಯಾ! ದುಡ್ಡಿನ ಕಾಲಲ್ಲಿ ನಿನ್ನ ಬಾಳುವೆಯನ್ನು ಹಾಳು ಮಾಡಲಿ! ಮಂದಿಯ ಮನೆಯಲ್ಲಿ ದುಡಿಯೋಣ. ಅದೂ ಆಗದಿದ್ದರೆ ಉಪವಾಸ ಬೀಳೋಣ! ನಾನಂತೂ ದುಡ್ಡಿಗೆ ಮರುಳಾಗಿ ನಿನ್ನಂಥ ಮುದ್ದು ಮಗಳನ್ನು ಮಾತ್ರ ಆ ವೃದ್ಧ ಕಪಿಗೆ ಕೊಡಲು ಎಂದೂ ಒಪ್ಪಲಾರೆ! ಈ ನಿನ್ನ ಅವ್ವನು ದುಡ್ಡಿಗೆ ಬಾಯಿ ಬಿಡುವವಳೆಂದು ತಿಳಿಯಬೇಡ. ಹೆಣ್ಣುಮಕ್ಕಳನ್ನು ಮಾರಿಕೊಳ್ಳುವವರು ಮಾರಿಕೊಳ್ಳಲಿ! ನಾನು ಮಾತ್ರ ಎಂಥ ಕಠಿಣ ವೇಳೆ ಬಂದರೂ ನನ್ನ ಶೀಲವನ್ನು ಬಿಡತಕ್ಕವಳಲ್ಲ; ತಿಳಿಯಿತೇ?

ಸೌದಾ—ಅವ್ವಾ ನೋಡು; ನನ್ನ ಸಲುವಾಗಿ ನಿನಗೆ ಎಷ್ಟು ತ್ರಾಸವಾಗುತ್ತದೆ! ನನ್ನ ಸಲುವಾಗಿಯೇ (ಕಣ್ಣಿಗೆ ಶರಗು ಹಚ್ಚಿ) ಅಪ್ಪನು ಆತ್ಮಹತ್ಯೆಯನ್ನು ಮಾಡಿಕೊಂಡನು. ಇದಕ್ಕಿಂತ ನಾನೇ ಸತ್ತುಹೋಗಿ

ದ್ದರೆ; ಏನು ಕೆಡಕಾಗುತ್ತಿತ್ತು ? ಹಿರಾಲಾಲನ ಅಂಜಿಕೆಯೇನೆಂದು ನೀನು
ಅನ್ನುವಿ? ಆದರೆ ಅವನ ವಿಷಯದಲ್ಲಿ ನನಗೆ ಮಾತ್ರ ಬಹಳ ಅಂಜಿಕೆ
ಯುಂಟಾಗಿದೆ. ಏಕೆಂದರೆ ನಾಳೆ ಅವನು ಫಿರ್ಯಾದಿಯನ್ನು ಮಾಡಿದ
ನೆಂದರೆ ನಿನಗೆ ಕೋರ್ಟಿನ ಕಟ್ಟೆಯನ್ನೇರುವ ಪ್ರಸಂಗವು ಬರುವದು.
ಹೀಗಾಗುವದು ಒಳಿತಲ್ಲ. ಆದ್ದರಿಂದ ಆಚಾರ್ಯರ ಮಾತನ್ನು ಒಪ್ಪಿ
ಕೊಳ್ಳು. ಅವರು ಸೂಚಿಸಿದ ಮಾರ್ಗವು ನೆಟ್ಟಗಿರುವದು. ಅದರಿಂದ
ಯಾರಿಗೂ ತ್ರಾಸವಾಗಲಾರದು. ನಾನು ಈ ವಿಷಯವಾಗಿ ಬಹಳ ವಿಚಾ
ರವನ್ನು ಮಾಡಿದೆನು. ನನಗೆ ಆಚಾರ್ಯರ ಉಪಾಯವೇ ಯೋಗ್ಯವಾ
ದದ್ದೆಂದು ತೋರುತ್ತದೆ. ಜಗತ್ತಿನಲ್ಲಿ ಮುದುಕರನ್ನು ಮದುವೆಯಾದವ
ರೇನು ಕಡಿಮೆ ಜನರಿರುವರೋ ? ಅದರಂತೆಯೇ ನಾನೊಬ್ಬಳು.

ರಾಧಾ— ಸೌದಾಮಿನಿ, ಮಗಳನ್ನು ಮುದುಕನ ಕೊರಳಲ್ಲಿ ಕಟ್ಟು
ವಾಗ ಅವಳ ತಾಯಿಗೆ ಎಷ್ಟು ದುಃಖವಾಗುತ್ತದೆಂಬದು ನಿನಗೆ ಹೇಗೆ
ಗೊತ್ತಾಗಬೇಕು ? ಒಳ್ಳೇದು; ಆ ಹೊತ್ತು ನಮ್ಮ ಮನೆಗೆ ಬಂದ ಆ
ಇಬ್ಬರು ಗೃಹಸ್ಥರು, ಆ ಮೇಲೆ ತಿರುಗಿ ಬಂದಿದ್ದರೇನು ?

ಇಲ್ಲ. ಅವರಿಗೆ........' ಎಂದು ಸೌದಾಮಿನಿಯು ಅರೆ ಮಾತುಗಳ
ನ್ನಾಡಿದಳು. ಅದರ ಮೇಲೆ ರಾಧಾಬಾಯಿಯವರು ಏನೋ ಮಾತಾಡ
ತಕ್ಕವರಿದ್ದರು. ಅಷ್ಟರಲ್ಲಿ ನೆರೆಮನೆಯ ಸೀತಾಬಾಯಿಯವರು ಅವಲಕ್ಕಿ
ಯನ್ನು ಕುಟ್ಟುವದಕ್ಕಾಗಿ ಅವರನ್ನು ಕರೆಯಲಿಕ್ಕೆ ಬರಲು, ಅವರು ಸೀತಾ
ಬಾಯಿಯವರೊಡನೆ ಹೊರಟು ಹೋದರು. ಮನೆಯಲ್ಲಿ ಸುಮನೆಯು
ಎರಕೊಂಡು ಮಲಗಿಕೊಂಡಿದ್ದಳು. ಏಕಾಂತವು ದೊರೆತ ಕೂಡಲೆ ಸೌದಾ
ಮಿನಿಯ ಮನೋರೂಪಿಯಾದ ಹರಗೋಲು, ವಿಚಾರಸಾಗರದಲ್ಲಿ ಸಿಕ್ಕು
ಹೊಯ್ದಾಡಹತ್ತಿತು. ಅದು ಯಾವ ದಂಡೆಗೂ ಮುಟ್ಟಲೊಲ್ಲದು.
ಒಮ್ಮೆ ಮನಸ್ಸಿನಲ್ಲಿ ಯಾವದಾದರೂ ಎರಡು ವಿಚಾರಗಳ ತಾಕಲಾಟಕ್ಕೆ
ಆರಂಭವಾಯಿತೆಂದರೆ, ಮನಸಿನ ಸ್ಥಿತಿಯು ಬಹಳೇ ಸೂಕ್ಷ್ಮವಾಗುತ್ತದೆ.
ಒಂದು ಕ್ಷಣದಲ್ಲಿ ಒಂದು ವಿಚಾರದ ಪ್ರಾಬಲ್ಯವಾಗಿ, ಮತ್ತೊಂದು
ಮೂಲೆಗುಂಪಾಗುತ್ತದೆ. ಆದರೆ ಮತ್ತೊಂದು ಕ್ಷಣದಲ್ಲಿ ಆ ಮೂಲೆ

ಗುಂಪಾದ ವಿಚಾರವೇ ಈ ಮೊದಲು ತನ್ನ ಮೇಲೆ ಅಧಿಕಾರವನ್ನು ನಡೆಸಿದ ವಿಚಾರವನ್ನು ತಳಕ್ಕಟ್ಟುತ್ತದೆ. ಈ ಹೊತ್ತು ಸೌದಾಮಿನಿಯ ಮನಸ್ಸಿನಲ್ಲಾದರೂ ಇದೇ ಬಗೆಯ ಎರಡು ವಿಚಾರಗಳ ಯುದ್ಧಕ್ಕೆ ಆರಂಭವಾಗಿತ್ತು. ಅವಳು ತನ್ನೊಳಗೆ ತಾನೇ ಯೋಚಿಸತೊಡಗಿದಳು :—"ಹಯಗ್ರೀವಾಚಾರ್ಯರ ಮಾತಿನಂತೆ ನಡಕೊಂಡರೆ, ನನಗೆ ಹಿತವಾಗಬಹುದೋ? ಅಥವಾ ಜನ್ಮವನ್ನೆಲ್ಲ ದುಃಖದಲ್ಲಿ ಕಳೆಯಬೇಕಾಗುವದೋ? ಬೇಡವ್ವಾ ಆ ವಿಚಾರವೇ ಬೇಡ! ಮುದುಕ ಗಂಡನೆಂದ ಕೂಡಲೆ ಮೈ ಮೇಲೆ ಮುಳ್ಳೇ ಬರುತ್ತವೆ. ಯಾವನ ಬಳಿಯಲ್ಲಿ ನಿಂತುಕೊಂಡರೆ, ನಾನು ಅವನ ಮೊಮ್ಮಗಳಂತೆ ಕಾಣಿಸುತ್ತೇನೋ, ಅವನ ಸಂಗಡ ಮದುವೆಯನ್ನು ಹೇಗೆ ಮಾಡಿಕೊಳ್ಳಲಿ? ಮುದುಕಗಂಡನ ಸಂಗಡ ಮದುವೆಯನ್ನು ಮಾಡಿಕೊಳ್ಳಲಿಕ್ಕೆ ಯಾರೂ ಒಪ್ಪಲಿಕ್ಕಿಲ್ಲ! ಒಳ್ಳೇದು, ನಾನೂ ಅವರಂತೆ ಮಾಡಿದರೆ ಹಿರಾಲಾಲನ ಸಾಲವು ಹೇಗೆ ತೀರುವದು? ಅವನ ಅವಧಿಯಂತೂ ಎಂಟೇ ದಿವಸ ಉಳಿಯಿತು. ಅಷ್ಟರಲ್ಲಿ ಅವನ ಹಣವನ್ನು ಕೊಡದಿದ್ದರೆ, ಅವನು ಫಿರ್ಯಾದಿಯನ್ನು ಮಾಡುವನು. ಆಗ ಅವ್ವನಿಗೆ ಕೋರ್ಟಿಗೆ ಹೋಗುವ ಪ್ರಸಂಗವು ಬರುವದು. 'ಏನೇ ಆಗಲಿ, ಕೋರ್ಟಿನ ಕಟ್ಟೆಯನ್ನು ಹತ್ತಬೇಡಿರೆಂದು' ಹಿರಿಯರು ಹೇಳುತ್ತಾರೆ; ಅದೇನು ಸಟೆಯಲ್ಲ. ನನ್ನ ತಾಯಿಯನ್ನು ಕೋರ್ಟಿಗೆ ಕಳಿಸುವದಕ್ಕಿಂತ, ಆಚಾರ್ಯರ ಮಾತಿಗೆ ಒಪ್ಪಿಕೊಂಡು, ಅವಳ ಋಣದೊಳಗಿಂದ ಪಾರಾಗುವದೇ ನೆಟ್ಟಗೆ ಕಾಣುತ್ತದೆ! ತಾಯಿಯನ್ನು ದುಃಖಸಾಗರದಲ್ಲಿ ನೂಕಿ ತಾನು ಸುಖ-ಶಿಖರದ ಮೇಲೆ ಕೂಡುವದು ಸರಿಯಲ್ಲ! ಹೀಗೆ ಮಾಡುವದು ನನಗೆ ಒಪ್ಪುವದಿಲ್ಲ; ಆದರೆ ಈ ನನ್ನ ವಿಚಾರವು ತಾಯಿಯ ಮನಸ್ಸಿಗೆ ಬರುವದಿಲ್ಲ; ಅದಕ್ಕೇನು ಮಾಡಬೇಕು? ಅವಳ ಕಡೆಗಾದರು ಏನು ಆದೆ? ಮಗಳನ್ನು ದುಃಖದಲ್ಲಿ ದೂಡಿ, ಸುಖವನ್ನನುಭವಿಸಲಿಕ್ಕೆ ಯಾವ ತಾಯಿಯು ಸಿದ್ಧಳಾಗುವಳು? ಅದು ತಾಯಿಯ ಕರಳು! ತಾಯಿಯ ಯೋಗ್ಯತೆಯು ಬೇರೆ ಯಾರಿಗೂ ಬರಲಾರದು! ಮೊನ್ನೆ ನಾನು ಒಂದು ಗ್ರಂಥದಲ್ಲಿ ಓದಿರುವೆನು. ಅದರಲ್ಲಿ ಒಬ್ಬ ಗೃಹಸ್ಥನು ತನ್ನ ತಾಯಿಯ ವಿಷಯವಾಗಿ ಈ ಪ್ರಕಾರ ಅನ್ನುತ್ತಾನೆ:—" ಜಗತ್ತಿನೊಳ

ಗಿನ ಎಲ್ಲ ಸಜೀವ ನಿರ್ಜೀವ ವಸ್ತುಗಳ ಬೆಲೆಯನ್ನು ಕಟ್ಟಬಹುದು; ಆದರೆ ತಾಯಿಯ ಬೆಲೆಯನ್ನು ಮಾತ್ರ ಕಟ್ಟಲಿಕ್ಕೆ ಬರಲಾರದು! ಅವಳು ಒಂದು ಅಮೂಲ್ಯವಾದ ವಸ್ತುವಿನೋಪಾದಿಯಲ್ಲಿರುವಳು. ನನ್ನ ಮನಸ್ಸೆಂಬ ತಕ್ಕಡಿಯಲ್ಲಿ ಒಂದು ಬದಿಗೆ ಎಲ್ಲ ಪ್ರಥ್ವಿಯನ್ನೂ ಮತ್ತೊಂದು ಬದಿಗೆ ತಾಯಿಯನ್ನೂ ಇಟ್ಟರೆ, ನಿಶ್ಚಯದಿಂದ ನನ್ನ ತಾಯಿ ಕುಳಿತ ಪರಡಿಗೆಯೇ ಜಡವಾಗುವದು! ಸಾರಾಂಶ, ಪೃಥ್ವಿಗಿಂತ ತಾಯಿಯ ಭಾರವು (ಯೋಗ್ಯತೆಯು) ದೊಡ್ಡದದೆ! ”

ತಾಯಿಯ ವಿಷಯವಾಗಿ ಬರೆದಂಥ ಈ ಅಭಿಪ್ರಾಯವು ಅಕ್ಷರಶಃ ನಿಜವದೆ! ಈ ಪ್ರಕಾರ ಯೋಗ್ಯತೆಯುಳ್ಳ ನನ್ನ ತಾಯಿಯ ಸುಖದ ಸಲುವಾಗಿ, ಆಚಾರ್ಯರ ಮಾತನ್ನು ಒಪ್ಪಿಕೊಂಡದಾಯಿತು! ಆದಿರಲಿ, ಆ ಹೊತ್ತು ನಮ್ಮ ಮನೆಗೆ ಬಂದು, ನಮ್ಮ ಅಪ್ಪನು ಸತ್ತಸುದ್ದಿಯನ್ನು ಹೇಳಿ, ಪತ್ರವನ್ನೂ ಅವರ ಅರಿವೆಗಳನ್ನೂ ಕೊಟ್ಟು ಹೋದವರು ಯಾರಿರಬಹುದು? ಇನ್ನೂ ಅವರ ಮದುವೆಯಾಗಿರಲಿಕ್ಕಿಲ್ಲವೋ? ಒಂದು ವೇಳೆ ಆಗದಿದ್ದರೂ ಅವರಿಂದ ನನಗೇನು ಉಪಯೋಗವು? ನಾನು ಬಡ ವರ ಮಗಳು! ಈಗೀಗಂತೂ ನನಗೆ ಅವರ ನೆನಪು ಮೇಲಿಂದಮೇಲೆ ಆಗ ಹತ್ತಿದೆ. ಅದರ ಕಾರಣವೇನಿರಬಹುದು? ಅವರ ವಿಷಯವಾಗಿ ನನ್ನ ಮನಸ್ಸಿನಲ್ಲಿ ದಿನವೊಂದಕ್ಕೆ ಹೊಸ ಹೊಸ ವಿಚಾರಗಳುಂಟಾಗಹತ್ತಿವೆ. ಅವರು ನಮಗೆ ಭೆಟ್ಟಿಯಾಗಿ ಹೋಗಿ ಒಂದುವರೆ ತಿಂಗಳಾಯಿತು. ಅದರ ಮೇಲೆ ಅವರ ದರ್ಶನವೇ ಇಲ್ಲ. ಆ ಕಾಲಕ್ಕೆ ಅವರು ತಮ್ಮ ಹೆಸರು ಊರುಗಳನ್ನೇನೂ ಹೇಳಲಿಲ್ಲ; ಹಾಗೂ ಅವರು ಕೊಟ್ಟ ಪತ್ರದಲ್ಲಿ ಅವು ಬರೆಯಲ್ಪಟ್ಟಿರಬಹುದೆಂದು ತಿಳಿದು ನಾವೂ ಕೇಳಲಿಲ್ಲ; ಹಾಗು ಅದು ಕೇಳುವ ಹೊತ್ತೂ ಅಲ್ಲ. ಅವರು ನನ್ನ ಕೈಯಲ್ಲಿ ಕೊಟ್ಟ ಪತ್ರದ ನೆನಪೇ ನಮಗೆ ಇದ್ದಿದ್ದಿಲ್ಲ. ಒಂದು ದಿವಸ ಹೀಗೆಯೇ ಮಾತುಗಳು ಹೊರಟಾಗ ಅದರ ನೆನಪು ಆಗಿ, ಅದನ್ನು ಹರಿದು ನೋಡಲು. ಅದರಲ್ಲಿ ಐದೈದು ರೂಪಾಯಿಗಳ ಐದು ನೋಟುಗಳು ಇದ್ದವು. ಅವುಗಳನ್ನು ನೋಡಿ ಕ್ಷುಧೆ ಯಿಂದಪೀಡಿತನಾದವನಿಗೆ ಮಿಷ್ಟಾನ್ನವುದೊರೆತಂತಾಗಿ, ಆಕಾಲಕ್ಕೆ ನಮಗೆ ಆಹಣದಿಂದಬಹಳೇಉಪಯೋಗವಾಯಿತು. ದೇವಾ, ಆಹೊತ್ತು ಆ ದೊಡ್ಡ

ಮನಸ್ಸಿನ ಗೃಹಸ್ಥರು ಬಂದು ನಮಗೆ ಸಹಾಯಮಾಡಿದಂತೆ, ಈ ಹೊತ್ತು ಬಂದು ನಮ್ಮ ಮೇಲೆ ಅನುಗ್ರಹವನ್ನು ಮಾಡಲಾರರೇ! ದೇವಾ ಇನ್ನೊಮ್ಮೆ ಆ ಮೂರ್ತಿಗಳು ನನ್ನ ಕಣ್ಣಿಗೆ ಬಿದ್ದರೆ, ನಾನು ನಿನ್ನ ಹೆಸರಿನಿಂದ ಐದು ಉಪವಾಸಗಳನ್ನು ಮಾಡುತ್ತೇನೆ; ಸಾವಿರಾರು ಹಾಡುಗಳನ್ನು ಹಾಡಿ, ನಿನ್ನನ್ನು ಹೊಗಳುತ್ತೇನೆ; ನೂರಾರು ನಮಸ್ಕಾರಗಳನ್ನು ಹಾಕುತ್ತೇನೆ. ಇದೇ ನನ್ನ ಬಡವಿಯ ಹರಿಕೆಯು! ಇದೇ ನನ್ನ ಪ್ರಾರ್ಥನೆಯು!! ಕರುಣಾಸಾಗರ , ಅನಾಥರಕ್ಷಕಾ, ನೀನೇ ಈ ಅನಾಥಳನ್ನು ಧಿಃಕರಿಸಿದರೆ ಅವಳನ್ನು ಮುಂದಕ್ಕೆ ಕರೆಯುವವರಾರು? ನನ್ನಂಥ ಬಡಪ್ರಾಣಿಗಳು ಏನು ಮಾಡಬೇಕು? ಯಾರಿಗೆ ಶರಣು ಹೋಗಬೇಕು? ಹೀಗೆ ನಿಷ್ಠುರನಾಗಬೇಡ. ಬಡತನವೆಂಬ ಬಿಸಿಲಿನಲ್ಲಿ ಬಳಲುವಂಥ ಬಡವರಿಗೆ ವಿಶ್ರಾಂತಿಯನ್ನು ಕೊಡುವ ದಯೆಯ ನೆರಳು ನೀನೇ ಇರುವಿ! ಆ ವಿಶ್ರಾಂತಿದಾಯಕವಾದ ನೆರಳು ನನಗೆ ಸಿಗುವದೋ?”

“ಅವಶ್ಯವಾಗಿ ಸಿಗುವದು.” ಎಂಬ ಉದ್ಗಾರಗಳು ಒಮ್ಮೆಲೆ ಸೌದಾಮಿನಿಯ ಕಿವಿಗಳ ಮೇಲೆ ಅಪ್ಪಳಿಸಿ, ಅವಳು ಮಾಡಿದ ಪ್ರಶ್ನಕ್ಕೆ ಉತ್ತರವು ದೊರೆಯಿತು. ಈ ವರೆಗೆ ಅವಳು ಆತ್ಮವಿಚಾರದಲ್ಲಿಯೇ ಮುಳುಗಿ ಹೋಗಿದ್ದಳು. ಆದರೆ ಒಮ್ಮೆಲೆ ತನ್ನ ಪ್ರಶ್ನಕ್ಕೆ ಯಾರು ಉತ್ತರ ಕೊಟ್ಟರೆಂದು ಮೇಲಕ್ಕೆ ಮೋರೆಮಾಡಿ ನೋಡಲು, ಅವಳು ಧ್ಯಾನಿಸುತ್ತಿರುವ ಮೂರ್ತಿಗಳೇ ಅವಳ ಕಣ್ಣಿಗೆ ಬಿದ್ದವು. ತಾನು ಹೊತ್ತ ಹರಿಕೆಗೆ ದೇವರು ಒಲಿದನೆಂದು ತಿಳಿದು, ಅವಳು ಮನಸ್ಸಿನಲ್ಲಿಯೇ, ಆತನನ್ನು ಅನನ್ಯಭಾವದಿಂದ ಕೊಂಡಾಡಿದಳು, ಹಾಗು ತಟ್ಟನೆ ಎದ್ದು, ಈ ಸಾರೆ, ಆ ಹೊಸಬರ ಸ್ವಾಗತವನ್ನು ಮೊದಲಿಗಿಂತ ಹೆಚ್ಚಾಗಿ ಮಾಡಿದಳು.

“ಪರೀಕ್ಷೆಯನ್ನು ತೀರಿಸಿಕೊಂಡು ಬಂದು, ಹದಿನೈದು ದಿವಸಗಳಾದವು. ಶನಿವಾರ ಪೇಟಿಯೊಳಗಿನ ಗುರುನಾಥರಾಯರ ಮನೆಯಲ್ಲಿ ಇಳುಕೊಂಡಿರುವೆವು.” ಎಂದು ಆ ಇಬ್ಬರು ಗೃಹಸ್ಥರಲ್ಲಿ ಒಬ್ಬನು ಮಾತಿನ ಪ್ರಸ್ತಾಪವನ್ನು ತೆಗೆದನು.

“ಆ ಇನಾಮುದಾರರಾದ ಗುರುನಾಥರಾಯರ ಮನೆಯಲ್ಲಿ?”

ಎಂದು ಸೌದಾಮಿನಿಯು, ಆಶ್ಚರ್ಯಚಕಿತಳಾಗಿ, ಅವರನ್ನು ಕುರಿತು ಪ್ರಶ್ನೆ ಮಾಡಿದಳು.

"ಹೌದು, ಅವರಲ್ಲಿಯೇ ಇಳಕೊಂಡಿರುವೆವು. ಅವರ ಗುರುತು ನಿಮಗೆ ಇದ್ದಂತೆ ತೋರುತ್ತದೆ!" ಎಂದು ಮತ್ತೊಬ್ಬನು ನುಡಿದನು. ಅದಕ್ಕೆ ಸೌದಾಮಿನಿಯಿಂದ ಉತ್ತರವೇನೂ ದೊರೆಯಲಿಲ್ಲ ಆಕೆಯು ಒಂದು ನಿಟ್ಟುಸುರನ್ನು ಮಾತ್ರ ಬಿಟ್ಟಳು! ವಾಚಕರೇ, ಇದೇ ಅವಳ ಉತ್ತರವಿರಬಹುದೋ? ತನ್ನ ಪ್ರಶ್ನೆಕ್ಕೆ ಉತ್ತರವು ದೊರೆಯದ್ದರಿಂದ ಆ ಇಬ್ಬರಲ್ಲಿ ಒಬ್ಬನು—ನಿಮ್ಮ ತಾಯಂದಿರಾದ ರಾಧಾಬಾಯಿಯವರು ಎಲ್ಲಿದ್ದಾರೆ? ಎಂದು ಕೇಳಿದನು.

ಸೌದಾ—ಆಕೆಯು ಹೊರಗೆ ಹೋಗಿರುವಳು.

ಮತ್ತೊಬ್ಬ—ಅವರ ಕಡೆಗೆ ತುಸು ಕೆಲಸವದೆ!

ಸೌದಾ—ಅವ್ವನು ನೆರೆಮನೆಯಲ್ಲಿರಬಹುದು. ಕರೆದುಕೊಂಡು ಬರುತ್ತೇನೆ. ಅಥವಾ ನನ್ನ ಹತ್ತರ ಹೇಳುವಂಥ ಮಾತು ಇದ್ದರೆ ಹೇಳಬಹುದು.

ಒಬ್ಬನು—ಹೇಳಲಿಕ್ಕೇನೂ ಪ್ರತಿಬಂಧವಿಲ್ಲ; ಆದರೆ!

ಸೌದಾ—ಹೇಳಬೇಕೆಂದು ನಾನೇನು ಆಗ್ರಹಮಾಡುವದಿಲ್ಲ.

"ತಮಗಂತೂ ಓದಲಿಕ್ಕೆ ಬಂದೇ ಬರುತ್ತದೆ ಕಾರಣ ಬಾಯಿಂದ ಹೇಳುವದಕ್ಕಿಂತ ನಾವು ಒಂದು ಪತ್ರವನ್ನೇ ಬರೆದು ಕೊಡುತ್ತೇವೆ. ಅದರ ಮೇಲಿಂದ ಎಲ್ಲವೂ ತಿಳಿಯುವದು." ಎಂದು ಮತ್ತೊಬ್ಬನು ನುಡಿದು, ಪತ್ರವನ್ನು ಬರೆಯಲಿಕ್ಕೆ ಆರಂಭಿಸಿದನು. ಸುಮಾರು ಹತ್ತು ಮಿನಿಟುಗಳಲ್ಲಿ ಬರೆಯುವ ಕೆಲಸವು ಮುಗಿಯಿತು. ಆ ಮೇಲೆ ಅವನು, ಪತ್ರವನ್ನು ಒಂದು ಪಾಕೀಟಿನಲ್ಲಿ ಹಾಕಿ, ಅದನ್ನು ಸೌದಾಮಿನಿಯ ವಶಕ್ಕೆ ಕೊಟ್ಟನು. ಆ ಪತ್ರವನ್ನು ಇಸಕೊಳ್ಳುವಾಗ ಸೌದಾಮಿನಿಯ ಹಾಗು ಆ ವ್ಯಕ್ತಿಯ ನೇತ್ರಮೀಲನವಾಗಿ ಸ್ವಾಭಾವಿಕವಾಗಿಯೇ ಪ್ರೇಮ-ಪ್ರವಾಹವು ಹರಿಯಹತ್ತಿತು. ಪ್ರೇಮವೆಂಬ ಲೋಹಚುಂಬಕದಿಂದ ಅವರ ಮನಸ್ಸುಗಳೆಂಬ ಸೂಜಿಗಳು, ಅವರಿಗೆ ತಿಳಿಯದಲೇ ಒಂದನ್ನೊಂದು ಆಕರ್ಷಿಸಲ್ಪಟ್ಟವು. ಸಾರಾಂಶ, ಅವರಿಬ್ಬರ ನೇತ್ರ ಸಂಯೋಗದಿಂದ ಒಂದು

ಅದ್ಭುತವಾದ ಪ್ರೇಮ-ರಸದ ತಡಿಸಲುಂಟಾಗಿ, ಆ ಪ್ರೇಮಪ್ರೌಢವು ಅವರವರ ಅಂತಃಕರಣಗಳ ತಳಕ್ಕೆ ಹೋಗಿ, ಕಸುವಿನಿಂದ ಅಪ್ಪಳಿಸಹತ್ತಿತು!

ಸೌದಾಮಿನಿಯು ಕೈಯಲ್ಲಿ ಪತ್ರವನ್ನು ಕೊಟ್ಟ ಬಳಿಕ ಆ ಇಬ್ಬರು ಗೃಹಸ್ಥರು ಅಲ್ಲಿಂದ ಹೊರಟು ಹೋದರು. ಅನ್ನವಾಗುವ ವರೆಗೆ ತಡೆದರೂ ಅದು ಉಮ್ಮಗೆಯ್ಯುವ ವರೆಗೆ ತಡೆಯೋಣವಾಗುವದಿಲ್ಲ. ಇದರಂತೆಯೇ ಆ ಪತ್ರದ ವಿಷಯವಾಗಿ ಸೌದಾಮಿನಿಯು ಸ್ಥಿತಿಯಾಗಿತ್ತು. ಈಗ ಅವಳ ಮನಸ್ಸು ಅವಳ ಅಧೀನದಲ್ಲಿರಲಿಕ್ಕೆ ಒಪ್ಪಲೊಲ್ಲದು. ಆ ಗೃಹಸ್ಥರು ಮನೆಯ ಹೊರಗೆ ಕಾಲಿಟ್ಟದ್ದೇ ತಡ. ಸೌದಾಮಿನಿಯು ಪತ್ರವನ್ನೋದಹತ್ತಿದಳು. ಅವಳ ಅಂತಃಕರಣವು ಅವಳ ಅಂತಃಕರಣಕ್ಕೆ ಆ ಪತ್ರವನ್ನು ಓದಿ ತೋರಿಸುತ್ತಿತ್ತು. ಆದರಿಂದ ಅದು ಎರಡನೆಯವರಿಗೆ ಕೇಳಿಸುತ್ತಿದ್ದಿಲ್ಲ. ಬೇಕಾದವರು ಬೇಕಾದಷ್ಟು ಪ್ರಯತ್ನಮಾಡಿದರೂ ಅದು ಅನ್ಯರಿಗೆ ತಿಳಿಯದಂತೆಯೇ ಪರಮೇಶ್ವರನು ಆ ಅಂತಃಕರಣದ ರಚನೆಯನ್ನು ಮಾಡಿರುವನು. ಬಾಯಿಂದ ಹೊರಡುವ ಶಬ್ದಗಳಷ್ಟೇ ಇತರರಿಗೆ ತಿಳಿಯುವವು. ಆದರೆ ಅಂತಃಕರಣದೊಳಗಿನ ವಿಚಾರಗಳೂ, ಓದೋಣವೂ ಯಾರ ಅಂತಃಕರಣದಲ್ಲಿ ನಡೆದಿರುವವೋ, ಅವರಿಗೆ ಮಾತ್ರ ತಿಳಿಯುವವು. ಸೌದಾಮಿನಿಯು ಅಂತಃಕರಣಕ್ಕೆ ಅವಳೇ ಬಾಧ್ಯಸ್ಥಳು. ಆದುದರಿಂದ ಆಕೆಯ ಅಂತಃಕರಣದಲ್ಲಿ ನಡೆದ ವಾಚನದ ಅಭಿಪ್ರಾಯವನ್ನು ಬೈಲಿಗೆಳೆಯುವದು ನಮ್ಮ ಕೈಯಿಂದಾಗದ ಸಂಗತಿಯು! ವಾಚಕರೇ ಆ ಪತ್ರದೊಳಗಿನ ಸಂಗತಿಯನ್ನು ತಿಳಿದುಕೊಳ್ಳಲಿಕ್ಕೆ ನಿಮ್ಮ ಅಂತಃಕರಣಗಳು ಆತುರವಾಗಿರಬಹುದು. ಆದರೆ ಅದರೊಳಗಿನ ಅಭಿಪ್ರಾಯವನ್ನು ನಿಮಗೆ ತಿಳಿಸಲು, ಲೇಖಕನು ಅಸಮರ್ಥನಾಗಿರುವನು! ಸಿಟ್ಟಾಗಬೇಡಿರಿ. ಸೌದಾಮಿನಿಯ ಅಂತಃಕರಣದೊಳಗಿನ ರಹಸ್ಯವು ನಮಗೆ ಪೂರಾ ತಿಳಿಯದಿದ್ದರೂ ನಾವು, ಆ ರಹಸ್ಯವು ಆಕೆಯ ಮುಖಚರ್ಯೆಯ ಮೇಲಿಂದ, ಆನಂದದಾಯಕವಾಗಿದೆಯೋ, ಅಥವಾ ದುಃಖದಾಯಕವಾಗಿದೆಯೋ, ಸಿಟ್ಟನ್ನು ಹುಟ್ಟಿಸುವಂಥಾದ್ದಿರುವದೋ, ಇಲ್ಲವೆ ಲೋಭವನ್ನುಂಟುಮಾಡುವಂಥಾದ್ದದೆಯೊ, ಅಥವಾ ಸಮಾಧಾನವನ್ನಾಗಲಿ, ಮತ್ಸರವನ್ನಾಗಲಿ ಉಂಟುಮಾಡುವಂಥಾದ್ದಿರುವದೋ, ಎಂಬದನ್ನು ಮಾತ್ರ ನಿಶ್ಚಯವಾಗಿ ಹೇಳಬಲ್ಲೆವು. ಮುಖಚರ್ಯೆಯ ಮೇಲಿಂದ

ಅಂತಃಕರಣದೊಳಗಿನ ರಹಸ್ಯದ ಸ್ಥೂಲ-ಕಲ್ಪನೆಯು ಆಗುತ್ತದೆ. ಆಗೀಗ ನೋಡಿರಿ; ಸೌದಾಮಿನಿಯ ಮುಖ-ಕಮಲವು ಮೊದಲಿಗಿಂತ ಹೆಚ್ಚಿಗೆ ಕಳೆಯೇರಿರುವದು; ಅವಳ ಉದಾಸೀನತೆಯು ಅಳಿದು, ಅವಯವಗಳಲ್ಲಿ ತೇಜವುಂಟಾಗಿ, ಅದು ಆನಂದಾಶ್ರುಗಳ ರೂಪದಿಂದ ಹೊರಸೂಸುತ್ತಿ ರುವದು. ಎಷ್ಟು ಏಕಾಗ್ರತೆಯದು! ಅವಳ ತಾಯಿಯು ಬಂದು, ಅವಳ ಹತ್ತರ ನಿಂತುಕೊಂಡಿದ್ದರೂ ಅವಳಿಗೆ ಗೊತ್ತಾಗಿಲ್ಲ. ವಾಚಕರೇ, ಇಷ್ಟರ ಮೇಲಿಂದ ಸೌದಾಮಿನಿಯ ಅಂತಃಕರಣದೊಳಗಿನ ರಹಸ್ಯದ ಕಲ್ಪನೆಯು ನಿಮಗೆ ತಕ್ಕಮಟ್ಟಿಗಾದರು ಆಗಲಿಕ್ಕಿಲ್ಲವೇ? ಅವಳ ಅವಯವಗಳ ಲ್ಲಿಯೂ ಮುಖ-ಚರ್ಯೆಯಲ್ಲಿಯೂ ಆದ ಹೆಚ್ಚುಕಡಿಮೆಗಳ ಮೇಲಿಂದ ಆ ಪತ್ರದೊಳಗಿನ ಸಂಗತಿಯು, ಅವಳಿಗೆ ಸುಖವನ್ನುಂಟುಮಾಡು ವಂಥದೇ ಇರಲಿಕ್ಕೆಬೇಕೆಂದು ನಾವು ಖಂಡಿತವಾಗಿ ಹೇಳುತ್ತೇವೆ.

ರಾಧಾಬಾಯಿಯವರು ಕೆಲವು ಹೊತ್ತು ಸೌದಾಮಿನಿಯ ಹಿಂಭಾಗ ದಲ್ಲಿ ಸುಮ್ಮನೆ ನಿಂತುಕೊಂಡರು. ಪತ್ರವನ್ನೋದುವ ಕೆಲಸವು ಮುಗಿದಿ ದ್ದರೂ, ಸೌದಾಮಿನಿಯ ದೃಷ್ಟಿಯು ಅದರ ಮೇಲಿಂದ ಕದಲಲೊಲ್ಲದು! ಆಗ ರಾಧಾಬಾಯಿಯವರು ಬೇಸತ್ತು, ಸೌದಾಮಿನಿಯ ಕೈಯೊಳಗಿಂದ ಪತ್ರವನ್ನು ಸರಕ್ಕನೆ ಕಸುಕೊಂಡು—“ಯಾರ ಪತ್ರವಿದು? ಇದನ್ನೋ ದುವದರಲ್ಲಿ ಇಷ್ಟೇಕೆ ಮುಳುಗಿಹೋಗಿರುವೆ?” ಎಂದು ಪ್ರಶ್ನೆಮಾಡಲು, ಸೌದಾಮಿನಿಯು ಮೇಲಕ್ಕೆ ಮೋರೆ ಮಾಡಲು, ತಾಯಿಯು ತಾನು ಓದು ತ್ತಿರುವ ಪತ್ರವನ್ನು ಕೈಯಲ್ಲಿ ಹಿಡುಕೊಂಡು ನಿಂತಿದ್ದು, ಅವಳ ಕಣ್ಣಿಗೆ ಬಿತ್ತು. ಆಗ ಅವಳಿಗೆ ಎರೆದು ಹೊಚ್ಚಿದಂತಾಯಿತು! ರಾಧಾಬಾಯಿಯ ವರು, ಆ ಪತ್ರವನ್ನೆಲ್ಲ ಓದಿ—ಸೌದಾಮಿನಿ, ನಿನ್ನ ದೈವವು ಇಷ್ಟು ದೊಡ್ಡ ದದೆಯೋ!’ ಎಂದು ನುಡಿಯುವಷ್ಟರಲ್ಲಿ ಹಯಗ್ರೀವಾಚಾರ್ಯರು ಅಲ್ಲಿಗೆ ಬಂದರು; ಹಾಗು ಅವರು—ನೀವನ್ನುವಂತೆಯೇ ನಿಮ್ಮ ಮಗಳ ದೈವವು ದೊಡ್ಡದಿರುವದು. ಅದರ ಮನವರಿಕೆಯನ್ನು ಮಾಡುವದಕ್ಕಾಗಿಯೇ ನಾನು ನಿಮ್ಮನ್ನು ಕರೆಯಲಿಕ್ಕೆ ಬಂದಿರುವೆನು. ಗುರುನಾಥರಾಯರು ನನ್ನನ್ನು ಕಳಿಸಿರುವರು. ಅವರ ಚಿರಂಜೀವರಾದ ಗದಾಧರಪಂತರ ಗೆಳೆ ಯರಾದ ಕಮಲಾಕಾಂತ ಮತ್ತು ಶಾಮಸುಂದರ ಇವರ ಸಹವಾಸದಿಂದ

ಅವರ ಮೊದಲಿನ ವಿಚಾರಗಳು ಬದಲಾಗಿರುವವು. ಅವರು ಮತ್ತೆ ಲಗ್ನ ವನ್ನು ಮಾಡಿಕೊಳ್ಳುವ ಹಂಬಲವನ್ನು ಬಿಟ್ಟು ಬಿಟ್ಟಿರುವರು. ಇಷ್ಟೇ ಲ್ಲ; ಈ ಮೊದಲು ಮಾಡಿದ ಅವಿಚಾರದ ಬಗ್ಗೆ ತಮ್ಮ ಹತ್ತರ ಕ್ಷಮೆ ಯನ್ನು ಯಾಚಿಸಿರುವರು. ಅವರಿಗೂ ಅವರ ಸಂಗಡ ನನಗೂ ತಾವು ಕ್ಷಮೆಯ ಬಿಕ್ಕೆಯನ್ನು ನೀಡಬೇಕು. ನಾನು ಸ್ವಾರ್ಥದ ಬಲೆಯಲ್ಲಿ ಸಿಕ್ಕು ತಮಗೆ ಮನಬಂದಂತೆ ಉಪದೇಶವನ್ನು ಮಾಡಿದೆನು. ಆ ವಿಷಯವಾಗಿ ಈಗ ನನಗೆ ಪೂರ್ಣ ಪಶ್ಚಾತ್ತಾಪವಾಗಿದೆ! ಸದ್ಯಕ್ಕೆ ಗುರುನಾಥರಾಯರು ಸಮಾಜದ ಹಿತವನ್ನು ಹೇಗೆ ಸಾಧಿಸಬೇಕೆಂಬ ವಿಚಾರದಲ್ಲಿ ಮುಳುಗಿ ಹೋಗಿರುವರು. ಅವರು ನಿಮ್ಮ ಸೌದಾಮಿನಿಯ ವಿವಾಹದ ನಿಶ್ಚಯ ವನ್ನು ನಿಮ್ಮಿಬ್ಬರ ಮನಸ್ಸಿಗೆ ಬರುವಂತೆಯೇ ಮಾಡಿರುವರು. ಆ ವಿಷ ಯದಲ್ಲಿ ನಿಮ್ಮ ಅಭಿಪ್ರಾಯವನ್ನು ಕೇಳುವದಕ್ಕಾಗಿಯೇ, ನಿಮ್ಮನ್ನು ಕರೆದುಕೊಂಡು ಬರಬೇಕೆಂದು ನನ್ನನ್ನು ಕಳಿಸಿರುವರು. ಹಿರಾಲಾಲನ ಸಾಲವನ್ನೆಲ್ಲ ತೀರಿಸಿ ಇಂದಿಗೆ ಮೂರು ದಿವಸಗಳಾದವು. ಸೌದಾಮಿನಿಯ ವಿವಾಹದ ವೆಚ್ಚವನ್ನು ಗುರುನಾಥರಾಯರೇ ಮಾಡತಕ್ಕವರಿದ್ದಾರೆ. ನಾನು ಬಂದು ಬಹಳಹೊತ್ತಾಯಿತು. ಅವರು ನಮ್ಮ ಹಾದಿಯನ್ನು ನೋಡುತ್ತಿರಬಹುದು. ಕಾರಣ ಹೋಗೋಣ ನಡೆಯಿರಿ " ಎಂದು ನುಡಿ ಯಲು, ಆ ತಾಯಿಮಕ್ಕಳು, ಆಕಸ್ಮಿಕ ರೀತಿಯಿಂದಾದ ಈ ಪ್ರಕಾರದ ಬದಲಾವಣೆಯನ್ನು ಕೇಳಿ, ಬೆರಗಾದರು. ಅವರಿಗೆ ಆಚಾರ್ಯರ ಮಾತು ಗಳು ಸರಿದೋರಲೊಲ್ಲವು ಆದರೂ ಅವರ ಮಾತಿನಲ್ಲಿ ಎಷ್ಟು ತಥ್ಯಾಂಶ ವದೆಂಬದನ್ನು ಪರೀಕ್ಷಿಸಬೇಕು; ಎಂದು ಯೋಚಿಸಿ, ರಾಧಾಬಾಯಿಯ ವರು ಆಚಾರ್ಯರ ಸಂಗಡ ಗುರುನಾಥರಾಯರ ಮನೆಗೆ ಹೋದರು. ಗುರುನಾಥರಾಯರು ಅವರ ಹಾದಿಯನ್ನೇ ನೋಡುತ್ತ ಕುಳಿತುಕೊಂಡಿ ದ್ದರು. ರಾಧಾಬಾಯಿಯವರು ಹೋದ ಕೂಡಲೆ ಸೌದಾಮಿನಿಯ ವಿವಾ ಹದ ವಿಷಯವಾಗಿಯೇ ಮಾತುಗಳು ನಡೆದವು. 'ರೋಗಿಯು ಬಯ ಸಿದ್ದು ಹಾಲೋಗರವು; ವೈದ್ಯನು ಹೇಳಿದ್ದೂ ಹಾಲೋಗರವು. ಎಂಬಂತೆ, ರಾಧಾಬಾಯಿಯವರ ಮನಸ್ಸಿನಲ್ಲಿದ್ದಂತೆ ಕಮಲಾಕಾಂತನ ಹೆಸರನ್ನೇ ಗುರುನಾಥರಾಯರು ಮುಂದೆ ಮಾಡಿದರು. ಕಮಲಾಕಾಂತನ ಮನಸ್ಸಿನ ಲ್ಲಾದರೂ ಸೌದಾಮಿನಿಯನ್ನೇ ಲಗ್ನವಾಗಬೇಕೆಂಬ ಹಂಬಲವಿತ್ತು.

ಈಶ್ವರೀಸೂತ್ರದ ಆಧಾರದಿಂದ ಅವರೆಲ್ಲರ ಬಯಕೆಗಳು ಪೂರ್ಣವಾಗುವ ಸುಸಮಯವು ಒದಗಿಬಂತು. ಮುಂದೆ ತುಸು ದಿವಸಗಳಲ್ಲಿಯೇ ಒಂದು ಸುಮುಹೂರ್ತದ ಮೇಲೆ ಕಮಲಾಕಾಂತನು ಸೌದಾಮಿನಿಯ ಪಾಣಿ-ಗ್ರಹಣವನ್ನು ಮಾಡಿದನು. ಮದುವೆಯು ಸಾದಾರೀತಿಯಿಂದ ಆಯಿತು ಆದರೆ ಧಾರ್ಮಿಕ ಕೃತ್ಯಗಳಿಗೇನೂ ಕೊರತೆಯಾಗಲಿಲ್ಲ. ಅನವಶ್ಯಕವಾದ ವೆಚ್ಚಕ್ಕೆ ಮಾತ್ರ ಬಹಿಷ್ಕಾರವು ಹಾಕಲ್ಪಟ್ಟಿತ್ತು. ಮದುವೆಯಲ್ಲಿ ಗುರುನಾಥರಾಯರೂ, ಶಾಮಸುಂದರನೂ, ಗದಾಧರನೂ ಬಹಳ ಶ್ರಮ ತಕ್ಕೊಂಡು ದುಡಿದರು. ಗುರುನಾಥರಾಯರು, ಕಮಲಾಕಾಂತನ ತಂದೆಯವರಿಗೆ ಮದುವೆಗೆ ಬರಬೇಕೆಂಬದಾಗಿ ಪತ್ರವನ್ನು ಬರೆದಿದ್ದರು. ಕಮಲಾಕಾಂತನೂ ತನ್ನ ತಾಯಿ ತಂದೆಗಳಿಗೆ ಪುತ್ರಧರ್ಮಕ್ಕನುಸಾರವಾಗಿ, ಲಗ್ನಕ್ಕೆ ಬರಬೇಕೆಂದು ಬಹು ವಿನಯದಿಂದ ಒಂದು ಪತ್ರವನ್ನು ಬರೆದಿದ್ದನು. ಆದರೆ ಅವರ ದೈವದಲ್ಲಿ ಮಗನ ಮದುವೆಯನ್ನು ನೋಡುವ ಹಾಗು ನಾಂದಿಯನ್ನು ಕೂಡಿಸುವ ಯೋಗವು ಇದ್ದಿದ್ದಿಲ್ಲ. ಅಂತೇ ರಘುನಾಥರಾಯರು, ವಿಕ್ಷಿಪ್ತ ರೀತಿಯಿಂದ ಗುರುನಾಥರಾಯರಿಗೆ ಒಂದು ಪತ್ರವನ್ನು ಬರೆದು ತಮ್ಮ ವಿಚಿತ್ರಸ್ವಭಾವದ ಗುರುತು ಮಾಡಿಕೊಟ್ಟರು. ಅವರು ಇನ್ನೂ ವಾಯೀ ಕ್ಷೇತ್ರದಲ್ಲಿಯೇ ಇರುವರು. ಕಾಶೀ ಯಾತ್ರೆಗೆ ಹೋಗಿಲ್ಲ. ಇಂದು ಹೋಗೋಣ, ನಾಳೆ ಹೋಗೋಣ ಎಂದು ದಿನವೇಕ ಮಾಡಹತ್ತಿರುವರು. ಸೌದಾಮಿನಿಯು ಈಶ್ವರೀ ಸೂತ್ರದ ಪ್ರಕಾರ, ತನ್ನ ಮೊದಲಿನ ಸೌದಾಮಿನಿಯೆಂಬ ಹೆಸರನ್ನು ಬಿಟ್ಟು ' ಲಕ್ಷ್ಮೀಬಾಯಿ ' ಎಂಬ ಹೆಸರಿನಿಂದ, ತನ್ನ ಮನೋಬಯಕೆಯಂತೆ, ಕಮಲಾಕಾಂತನನ್ನು ಪತಿಯನ್ನಾಗಿ ಪಡೆದು, ಸೌಭಾಗ್ಯಮಂದಿರವನ್ನು ಹೊಕ್ಕಳು. ಅದೇ ಈಶ್ವರೀಸೂತ್ರದ ಪ್ರಕಾರ ಕಮಲಾಕಾಂತನಾದರೂ, ತಾನು ಈ ಮೊದಲೇ ಗೊತ್ತು ಮಾಡಿದ ಪ್ರಕಾರ ಒಂದು ಪೈ ಸಹ ವರದಕ್ಷಿಣೆಯನ್ನು ತಕ್ಕೊಳ್ಳದೆ, ಸಾದಾ ರೀತಿಯಿಂದ ತನ್ನ ಮದುವೆಯನ್ನು ಮಾಡಿಕೊಂಡನು. ಮುಂದೆ ತಿಂಗಳ ಒಳಹೊರಗೇ ರಘುನಾಥರಾಯರ ಕಡೆಯಿಂದ ' ಜಾನಕಿಬಾಯಿಯವರ ಪ್ರಕೃತಿಯು ಬಹಳೇ ಅಸ್ವಸ್ಥವಾದ ಬಗ್ಗೆ ಕಮಲಾಕಾಂತನಿಗೆ ತಾರು (ತಂತಿ ಸುದ್ದಿ)

ಬಂತು. ಆದರಿಂದ ಆವನು ತನ್ನ ಪತ್ನಿಯೊಡನೆ ವಾಯೀ ಕ್ಷೇತ್ರಕ್ಕೆ ಹೊರಟುಹೋದನು. ಶಾಮಸುಂದರನೂ ಆ ಹೊತ್ತೇ ತನ್ನ ಊರಿಗೆ ಹೋದನು ವಾಚಕರೇ ಈಶ್ವರೀ ಸೂತ್ರವೆಂದರೆ ಹೀಗೇ ಇರುವದು!!

---

## ೧೩ ನೆಯ ಪ್ರಕರಣ

### ವರದಕ್ಷಿಣೆಯೇ ಮುಳುವಾಯಿತು?

ಸೋಮವಾರ-ಸಾಯಂಕಾಲದ ಸಮಯ! ಕಮಲಾಕಾಂತನ ಮದುವೆಯಾಗಿ ಇಂದಿಗೆ ತಿಂಗಳಾಗಿತ್ತು. ಒಂದು ತಿಂಗಳು ಮೊದಲು ಸಾಯಂಕಾಲದಲ್ಲಿಯೇ ಬ್ರಾಹ್ಮಣರು 'ಸುಮುಹೂರ್ತ ಸಾವಧಾನ' ಎಂದು ಕಮಲಾಕಾಂತನನ್ನು ಎಚ್ಚರಗೊಳಿಸಿದ್ದರು; ಆದರೆ ಆಗ ಈ ಮಾತು ಅವನ ಮನಸ್ಸಿಗೆ ಹೊಳೆದಿದ್ದಿಲ್ಲ. ದಿನೇ ದಿನೇ ಮನುಷ್ಯನಿರ್ಮಿತವಾದ ಪ್ರಪಂಚವೆಂಬ ಬಲೆಯು ಆತನನ್ನು ಬಿಗಿಯಹತ್ತಿತ್ತು. ಇಂದು ಆತನ ತಾಯಿಯಾದ ಜಾನಕಿಬಾಯಿಯವರನ್ನು ಬೇರೊಂದು ಬಲೆಯು ಆಕರ್ಷಿಸಹತ್ತಿತ್ತು. ಆ ಬಲೆಯು ಮನುಷ್ಯನಿರ್ಮಿತವಾದ ಬಲೆಯಲ್ಲ. ಯಾವತ್ತು ಪ್ರಾಣಿಗಳು ಯಾವ ಬಲೆಗೆ ಅಂಜಿ ದೂರ ಓಡುತ್ತವೆಯೋ, ಯಾವದನ್ನು ತಪ್ಪಿಸಿಕೊಳ್ಳಲಿಕ್ಕೆ ಯತ್ನಮಾಡುತ್ತವೆಯೋ, ಆ ಮೃತ್ಯುವೆಂಬ ಬಲೆಯು ಜಾನಕೀಬಾಯಿಯವರನ್ನು ಬಿಗಿಯಹತ್ತಿತ್ತು. ಒಂದು ವೇಳೆ ಬಹಳ ಆಯಾಸಬಟ್ಟು, ಪ್ರಾಪಂಚಿಕ ಬಲೆಯೊಳಗಿಂದ ಪಾರಾಗಬಹುದು; ಆದರೆ ಯಮಪಾಶದೊಳಗಿಂದ ಮಾತ್ರ ಯಾರೂ ಪಾರಾಗಲಾರರು! ಅರಸುಅರಸಿಯರು, ಸಾಧು-ಸಂತರು, ಜ್ಞಾನಿ-ಅಜ್ಞಾನಿಗಳು, ಇವರಲ್ಲಿ ಯಾರು ಆ ಅಂತಕನ ಬಲೆಯೊಳಗಿಂದ ಪಾರಾಗುವರು?

ಈ ಹೊತ್ತು ಜಾನಕೀಬಾಯಿಯವರು ಆಸನ್ನಮರಣರಾಗಿ ಹಾಸಿಗೆಯಮೇಲೆ ಬಿದ್ದುಕೊಂಡಿದ್ದರು. ಕಮಲಾಕಾಂತನು ಅವರ ತಲೆದಿಂಬಿಗೆ ಕುಳಿತುಕೊಂಡು, ಅವರನ್ನು ಪರಾಮರ್ಶಿಸುತ್ತಿದ್ದನು. ಲಕ್ಷ್ಮೀಬಾಯಿಯು (ಸೌದಾಮಿನಿಯು) ಅತ್ತೆಯ ಪಾದಸೇವೆಯನ್ನು ಮಾಡುತ್ತ ಕಾಲುದಶೆಯಲ್ಲಿ ಕುಳಿತಿದ್ದಳು. ಅಲ್ಲೇ ಒಂದು ಕೋಚಿನ ಮೇಲೆ, ರಘುನಾಥ

ರಾಯರು ಖಿನ್ನಮನಸ್ಕರಾಗಿ ಕುಳಿತುಕೊಂಡಿದ್ದರು. ಅವರ ಕಣ್ಣೊಳ
ಗಿಂದ ಅಶ್ರು-ಪ್ರವಾಹವು ಒಂದೇಸವನೆ ನಡೆದಿತ್ತು; ಅವರ ಮೋರೆಯು
ಪಶ್ಚಾತ್ತಾಪದಿಂದ ಬಾಡಿ, ಬತ್ತಿಹೋಗಿತ್ತು

" ಅವ್ವಾ, ಅವ್ವಾ, ಹೀಗೇಕೆ ಮಾಡುವಿ? ನನ್ನ ಗುರುತು ಹತ್ತಲಿ
ಲ್ಲದೇ? ನಾನು ನಿನ್ನ ಪ್ರೀತಿಯ ಕಮಲಾಕಾಂತನು; ನನ್ನ ಕೂಡ ಒಂದು
ಮಾತನ್ನಾದರೂ ಆಡಬಾರದೆ? " ಎಂದು ಕಮಲಾಕಾಂತನು ಖಿನ್ನ
ಮನಸ್ಸಿನಿಂದ ನುಡಿದನು. ಅದಕ್ಕೆ ಜಾನಕೀಬಾಯಿಯವರಿಂದ ಏನೂ
ಉತ್ತರವು ದೊರೆಯಲಿಲ್ಲ. ಅವರ ನಾಲಿಗೆಯು ಒಳಸೇರಹತ್ತಿ, ಅವರಿಗೆ
ಮಾತಾಡಲಿಕ್ಕೆ ಬಾರದಂತಾಗಿತ್ತು. ಮಗನ ಪ್ರಶ್ನೆಗೆ ಉತ್ತರವೆಂದು,
ಅವರು ಕಣ್ತುಂಬನೀರು ತಂದು ಒಮ್ಮೆ ಮಗನನ್ನು ದಿಟ್ಟಿಸಿ ನೋಡಿದರು.
ಅಷ್ಟರಲ್ಲಿ ವಿಷಣ್ಣವದನದಿಂದ ಕುಳಿತುಕೊಂಡ, ರಘುನಾಥರಾಯರು
ತಟ್ಟನೆ ಎದ್ದು, ಹಾಸಿಗೆಯ ಸಮೀಪಕ್ಕೆ ಬಂದು, ಪತ್ನಿಯನ್ನು ಮಾತಾಡಿಸ
ತೊಡಗಿದರು. ಅವರಿಗೂ ಉತ್ತರವು ದೊರೆಯಲಿಲ್ಲ. ಏಳು ಹೊಡೆಯಿತು.
ಭಗವಾನ್ ಸೂರ್ಯನಾರಾಯಣನು ತನ್ನ ಕಿರಣಗಳೆಂಬ ಬಲೆಯಲ್ಲಿ
ಪ್ರಕಾಶವನ್ನು ತೊಡಕಿಸಿಕೊಂಡು ಅಸ್ತನಾದನು. ಕೂಡಲೆ ಎತ್ತ ನೋಡಿ
ದತ್ತ ಕತ್ತಲೆಯು ಮುಸುಕಹತ್ತಿತು. ಸಾರಾಂಶ ಭೀಷಣಕೃತ್ಯಗಳನ್ನು
ಮಾಡುವವರಿಗೆ ಪ್ರಿಯವಾದ ನಿಶಾದೇವಿಯ ಸಾಮ್ರಾಜ್ಯಕ್ಕೆ ಆರಂಭವಾ
ಯಿತು. ಈಗ ಹಗಲು ಹೊತ್ತು ವರದಕ್ಷಿಣೆಯಂಥ ಭೀಷಣಕೃತ್ಯಗಳನ್ನು
ಮಾಡಲಿಕ್ಕೆ ಎಷ್ಟೋ ಜನರು ಹೇಸುವದಿಲ್ಲ! ಆ ಮಾತು ಒತ್ತಟ್ಟಿಗಿರಲಿ.
ಇದೇ ಸುಮಾರಕ್ಕೆ ನಮ್ಮ ಜಾನಕೀಬಾಯಿಯವರ ಪ್ರಾಣರೂಪವಾದ
ಪ್ರಕಾಶವನ್ನು ಯಮರಾಜನು ಮೃತ್ಯುವಿನ ಕಿರಣಗಳಿಂದ ಸಿದ್ಧಗೊಳಿಸಿದ
ಬಲೆಯಲ್ಲಿ ತೊಡಕಿಸಿಕೊಂಡು ಹೊರಟು ಹೋದನು! ಮನುಷ್ಯನು ಮಲಗಿ
ಕೊಂಡನೆಂದರೆ, ಅವನ ಐಶ್ವರ್ಯವನ್ನು ಬೇಕಾದವರು ಹರಣಮಾಡ
ಬಹುದು; ಅವನ ಶರೀರದ ವ್ಯವಸ್ಥೆಯನ್ನು ಬೇಕಾದವರು, ಬೇಕಾದ ಹಾಗೆ
ಮಾಡಬಹುದು. ಅದನ್ನು ಸುಟ್ಟರೂ, ಮಡುವಿನಲ್ಲಿ ಒಯ್ದು ಒಗೆದರೂ
ನೆಲದಲ್ಲಿ ಹುಗಿದರೂ ಅದರಿಂದ ಅದಕ್ಕೇನೂ ಬಾಧೆ ಬರುವದಿಲ್ಲ; ಇರಲಿ
ಜಾತಿ ಧರ್ಮದಂತೆ ಜಾನಕೀಬಾಯಿಯವರ ಔರ್ಧ್ವ-ದೇಹಿಕ ಕರ್ಮವು
ಮಾಡಿಸಲ್ಪಟ್ಟಿತು. ಮುಂದೆ ಹದಿಮೂರನೇ ದಿವಸದವರಿಗೆ ತಂದೆಮಕ್ಕಳಲ್ಲಿ

ಮಾತು ಕಳೆಗಳಾಗಲಿಲ್ಲ. ಹದಿನಾಲ್ಕನೆಯ ದಿವಸ ರಘುನಾಥರಾಯರು ಕಮಲಾಕಾಂತನನ್ನು ಹತ್ತರದಲ್ಲಿ ಕುಳ್ಳಿರಿಸಿಕೊಂಡು '—ಅಪ್ಪಾ, ಕಮಲಾಕಾಂತಾ,' ಎಂಬ ಶಬ್ದಗಳನ್ನು ಉಚ್ಚರಿಸುತ್ತಿರಲು, ಅವರ ಕುತ್ತಿಗೆಯ ಶಿರಗಳು ಉಬ್ಬಿ ಮಾತಾಡಲಿಕ್ಕೆ ಬಾರದಂತಾಯಿತು. ಆಗ ಕಮಲಾಕಾಂತನು—' ತಂದೆಯವರೇ, ಈ ಅನರ್ಥಕ್ಕೆಲ್ಲ ನಾನೇ ಕಾರಣನು! ನನ್ನ ಕೋಪದಿಂದಲೇ ಇಂದು ನಾನು ತಾಯಿಗೆ ಎರವಾದೆನು! ಅಪ್ಪಾಜೀ. ಇನ್ನಾದರೂ ನನ್ನ ತಪ್ಪುಗಳನ್ನು ಕ್ಷಮಿಸಿ, ನನ್ನ ಮೇಲೆ ದಯಾಮಾಡಬೇಕು. ಎಂದು ಅಂಗಲಾಚಿ ಬೇಡಿಕೊಂಡನು.

**ರಘು**—ಕಮಲಾಕಾಂತಾ, ಈ ಅನರ್ಥಕ್ಕೆಲ್ಲ ನಿಜವಾಗಿ ನಾನೇ ಕಾರಣನು! ನನ್ನ ವರದಕ್ಷಿಣೆಯ ಲೋಭವೇ ಈ ಅನರ್ಥಕ್ಕೆಲ್ಲ ಮುಳುವಾಯಿತು? ಈ ವರದಕ್ಷಿಣೆಯೇ ಇದಿಯಾಯಿತಪ್ಪಾ! ಆ ಕಾಲಕ್ಕೆ ನೀನು ಬರೆದದ್ದೇ ಯೋಗ್ಯವಾಗಿತ್ತು. ನಮಗೇನು ಕಡಿಮೆಯಿತ್ತು? ಎಂಜನೇಯವರಿಂದ ವರದಕ್ಷಿಣೆಯ ಹಣವನ್ನು ದೊರಕಿಸುವ ಹವ್ಯಾಸವು ಯಾತಕ್ಕೆ ಬೇಕಾಗಿತ್ತು? 'ವಿನಾಶಕಾಲೇ ವಿಪರೀತಬುದ್ಧಿ''? ಈಗ ನನ್ನ ಮೊದಲಿನ ವಿಚಾರಗಳು ಬದಲಾಗುವವು. ಅವುಗಳಿಗೆ ಆಕೆಯ ಮರಣವೆಂಬ ತೀಕ್ಷ್ಣವಾದ ಅಂಜನವು ದೊರೆತದೆ. ಯಾವದೊಂದು ಕೆಟ್ಟ ಕೆಲಸವನ್ನು ಮಾಡುವಾಗ ಅದರ ಪರಿಣಾಮದ ಕಡೆಗೆ ಲಕ್ಷಹೋಗುವದಿಲ್ಲ. ಅದರ ಪರಿಣಾಮವು ಭಯಂಕರವಾಗಿ ಪರಿಣಮಿಸಿತೆಂದರೆ, ಆ ಕಾರ್ಯಗಳಲ್ಲಿ ಅನಾದರವುಂಟಾಗುತ್ತದೆ. ನನ್ನ ಸ್ಥಿತಿಯಾದರೂ ಹೀಗೆಯೇ ಆಗಿರುತ್ತದೆ. ವರದಕ್ಷಿಣೆಯ ಭಯಂಕರವಾದ ಪರಿಣಾಮವು, ಆಕೆಯ ಮರಣದಿಂದ ಚನ್ನಾಗಿ ನನ್ನ ನಿದರ್ಶನಕ್ಕೆ ಬಂತು? ನನ್ನ ಚಂಡಿಸ್ವಭಾವಕ್ಕೆ ಅರವಾಳಿ ಹತ್ತಿತು. ಇತ್ತಿತ್ತಲಾಗಂತೂ ಅವಳು ನಿನ್ನ ಮದುವೆಯ ಧ್ಯಾಸವನ್ನೇ ಮಾಡಹತ್ತಿದ್ದಳು. ನಿನ್ನ ಭೆಟ್ಟಿಯ ಸಲುವಾಗಿಯೇ ಅವಳು ಜೀವವನ್ನು ಧರಿಸಿದ್ದಳು. ಇತ್ತ ಹೊರಟು ಬರಬೇಕೆಂದು ನಾನು ನಿನಗೆ ತಾರುಮಾಡಿದಾಗ ನೀನು ಬರುತ್ತಿಯೋ ಇಲ್ಲೋ ಎಂಬ ಬಗ್ಗೆ ನನಗೆ ಸಂಶಯವಿತ್ತು. ಆದರೆ ನೀನು ಬಂದಿ., ನೆಟ್ಟಗಾಯಿತು. ನಿನ್ನ ಕೂಡ ಆಕೆಗೆ ಮಾತಾಡಲಿಕ್ಕೆ ಬಾರದಿದ್ದರೂ, ಅವಳು ನಿಮ್ಮಿಬ್ಬರನ್ನು ಕಣ್ತುಂಬ ನೋಡಿದಳು. ಆಕೆಯ ಭಾಗ್ಯವು ಬಲು ದೊಡ್ಡದು. ಅಂತೆ ಮಗನ ತೊಡೆಯ ಮೇಲೆ ತಲೆಯನ್ನಿಟ್ಟು ಪ್ರಾಣವನ್ನು ಬಿಟ್ಟಳು. ಅಂತ್ಯ ಕಾಲದಲ್ಲಿ ಮಾಡಿದ ಮಾತಾಪಿತೃ

ಗಳ ಸೇವೆಯು ವಿಫಲವಾಗಲಾರದು? ಇತ್ತತ್ತಲಾಗಂತೂ ಅವಳು ನಿನ್ನ ಮದುವೆಯ ಧ್ಯಾಸವನ್ನೇ ತಕ್ಕೊಂಡಿದ್ದಳು ಆದರೆ ನನ್ನ ಚಂಡಿ ಸ್ವಭಾವದ ಮುಂದೆ ಅವಳದೇನೂ ನಡೆಯಲಿಲ್ಲ ನಾನು ಆಕೆಯ ಮಾತನ್ನು ಮನಸ್ಸಿನ ಮೇಲೆ ಹಾಕಿಕೊಳ್ಳಲಿಲ್ಲ. ಆದುದರಿಂದ ಅವಳು ಹಾಗಯೇ ಮನಸ್ಸಿನಲ್ಲಿ ನವೆಯುತ್ತ ನಡೆದಿದ್ದಳು. ಕಮಲಾಕಾಂತಾ, ಒಟ್ಟಿನ ಮೇಲೆ ಹೇಳುವದೇನಂದರೆ, ನನ್ನ ವರದಕ್ಷಿಣೆಯ ಲೋಭವೇ ಅವಳ ಮೃತ್ಯುವಿಗೆ ಕಾರಣವಾಯಿತು. ಇನ್ನು ಮೇಲೆ ನೀನು ನನ್ನ ಇಚ್ಛೆಯಂತೆ ........ ಎಂದು ನುಡಿಯುತ್ತಿರಲು, ಅವರ ಕಂಠವು ಸದ್ಗದಿತವಾಯಿತು. ಆಗ ಕಮಲಾಕಾಂತನು— ತಂದೆಯವರೇ ದುಃಖಿಸಬೇಡಿರಿ. ತಮ್ಮ ಇಚ್ಛೆಯು ಏನಿರುವದು? ಯಾವದೊಂದು ಮಾತನ್ನು ಮನಸ್ಸಿನಲ್ಲಿಟ್ಟುಕೊಂಡು ಮರಗುವದು ಸರಿಯಲ್ಲ. ಮಿಂಚಿ ಹೋದ ಮಾತಿಗೆ ಚಿಂತಿಸಿ ಫಲವೇನು? ತಾವು ಹಿರಿಯರುವಿರಿ, ಪೂಜ್ಯರಿರುವಿರಿ, ತಮಗೆ ಹೇಳುವ ಅಧಿಕಾರವು ನನಗಿಲ್ಲ. ಆದರೆ ಪ್ರೇಮದ ಮುಂದೆ ಅಧಿಕಾರದ ಸಂಬಂಧವು ಉಳಿಯುವದಿಲ್ಲ, ಇನ್ನು ತಮ್ಮ ಹತ್ತರ ಬೇಡಿಕೊಳ್ಳುವದೇನಂದರೆ ತಮ್ಮ ಇಚ್ಛೆಯನ್ನು ನನಗೆ ಒಡೆದು ಹೇಳಿರಿ. ನಾನು ಅದರಂತೆಯೇ ನಡೆಯುವೆನು. ಎಂದು ನುಡಿದು ತಂದೆಗೆ ಆಶ್ವಾಸನವನ್ನು ಕೊಟ್ಟನು. ಆಗ ರಘುನಾಥರಾಯರು— ಕಮಲಾಕಾಂತಾ, ಏನು ಹೇಳಲಿ? ಈ ವರದಕ್ಷಿಣೆಯ ಲೋಭವೇ ನನ್ನನ್ನು ಸುಡುತ್ತಿರುವದು. ಅದರ ಸಲುವಾಗಿಯೇ ನಾನು ಅವಳಿಗೆ ಎರವಾದೆ! ಬಾಳಾ, ನನಗೆ ವರದಕ್ಷಿಣೆಯೇ ಮುಳುವಾಯಿತು.? ಎಂದು ನುಡಿಯುತ್ತಿರಲು, ಈ ಮೊದಲೇ ವಾಚಕರ ಪರಿಚಿತರಾದ ಶ್ರೀನಿವಾಸರಾಯರು ಅಲ್ಲಿಗೆ ಬಂದರು. ಅವರನ್ನು ನೋಡಿದ ಕೂಡಲೆ, ನೀರಿನಲ್ಲಿ ಹೆಂಟೆ ಚಲ್ಲಿದಂತೆ ರಘುನಾಥರಾಯರ ಸ್ಥಿತಿಯಾಯಿತು. ಏಕಂದರೆ, ಈ ಮೊದಲು, ಅವರಲ್ಲಿಯೂ ಶ್ರೀನಿವಾಸರಾಯರಲ್ಲಿಯೂ ವರದಕ್ಷಿಣೆಯ ಸಂಬಂಧವಾಗಿ ಆದಂಥ ಮಾತುಗಳನ್ನು ಲಕ್ಷ್ಯಕ್ಕೆ ತರ್ರಿ; ಅಂದರೆ ಅದರ ಮರ್ಮವು ಗೊತ್ತಾಗುವದು· ಶ್ರೀನಿವಾಸರಾಯರು ಬಂದ ಕೂಡಲೆ ಕಮಲಾಕಾಂತನು ತನ್ನ ಕೆಲಸಕ್ಕಾಗಿ ಬೇರೆ ಕಡೆಗೆ ಹೊರಟುಹೋದನು. ಮುಂದೆ ಎಷ್ಟೋ ಹೇಳ ರಘುನಾಥರಾಯರೂ ಶ್ರೀನಿವಾಸರಾಯರೂ ಅಂಥಿಂಥ ಮಾತುಗಳನ್ನು ಆಡುತ್ತ ಅಲ್ಲಿಯೇ ಕುಳಿತುಕೊಂಡರು.

---

# ೧೪ ನೆಯ ಪ್ರಕರಣ



## ವರದಕ್ಷಿಣೆಯೇ ಮುಳುವಾಯಿತು.

ಕಮಲಾಕಾಂತನು ಯಾವ ದಿವಸ ತನ್ನ ಹೊಸ ಹೆಂಡತಿಯೊಡನೆ ತನ್ನ ತಾಯಿಯ ಅಂತ್ಯಕಾಲದ ಭೆಟ್ಟಿಗೆ ವಾಯಿ ಕ್ಷೇತ್ರಕ್ಕೆ ಬಂದನೋ, ಅದೇ ದಿವಸ ಶಾಮಸುಂದರನಾದರೂ ಕರ್ಹಾಡಕ್ಕೆ ಹೋದನೆಂದು ಈ ಮೊದಲೇ ಹೇಳಿಯದೆ. ಅವನ ತಾಯಿಯಾದ ರಮಾಬಾಯಿಯವರು ಶಾಮಸುಂದರನ ಸಲುವಾಗಿ ಎಷ್ಟೋ ಹುಡಿಗೆಯರನ್ನು ನೋಡಿಟ್ಟಿದ್ದರು. ಆದರೆ ಅವರಿಗೆ ಮಾತನ್ನು ಮಾತ್ರ ಕೊಟ್ಟಿದ್ದಿಲ್ಲ ಯಾರಾದರೂ ನಮಗೆ ವಚನವನ್ನು ಕೊಡಿರಿ, ಎಂದು ಕೇಳಿದಾಗ ಅವರಿಗೆ ರಮಾಬಾಯಿಯವರು "ಈಗ ನಾನು ನಿಮಗೆ ವಚನವನ್ನು ಕೊಡಬೇಕು. ಒಂದು ವೇಳೆ ಶಾಮನು ಅದನ್ನು ಅಲ್ಲಗಳೆಯಬೇಕು. ಹೀಗಾಯಿತೆಂದರೆ ನಮ್ಮ ಮರ್ಯಾದೆಯು ಏನು ಉಳಿದಂತೆ ಆಯಿತು. ಇತ್ತಲಾಗಿನ ಸುಧಾರಿಸಿದ ಹುಡುಗರಿಗೆ ಹಿರಿಯರ ಮಾತುಗಳು ಮನಸ್ಸಿಗೆ ಬರುವದಿಲ್ಲ. ಕಾರಣ ಅವರ ಒಲವಿನಂತೆ ಹೋಗುವದೇ ಒಳ್ಳೇದು? ಇಲ್ಲದಿದ್ದರೆ ಅವರು ಮೈಗೆ ಬೂದಿಯನ್ನು ಬಡಕೊಂಡು ಎಲ್ಲಿಯಾದರೂ ಹೊರಟು ಹೋಗಲಿಕ್ಕೆ ಕಡಿಮೆ ಮಾಡುವವರಲ್ಲ ನಮ್ಮ ಶಾಮನ ಗೆಳೆಯನಾದ ಕಮಲಾಕಾಂತನ ಮದುವೆಯ ಕಾಲದಲ್ಲಾದ ಹುಚ್ಚಾಟವನ್ನು ನೋಡಿ ನನಗೂ ನನ್ನ ಶ್ಯಾಮನ ವಿಷಯವಾಗಿ ಭಯ ಉಂಟಾಗುತ್ತದೆ. ಆದರೆ ನಮ್ಮ ಶ್ಯಾಮನು ಅಂಥವನಲ್ಲ! ಏನೇ ಇರಲಿ ಆತನು ಬಂದ ಮೇಲೆಯೇ ಗೊತ್ತು ಮಾಡೋಣ" ಎಂದು ಉತ್ತರವನ್ನು ಕೊಡುತ್ತಿದರು.

ಶಾಮಸುಂದರನು ಕರ್ಹಾಡಕ್ಕೆ ಹೋದದ್ದೇ ತಡ. ಅವನ ಮನೆಗೆ ವಧುವಿನ ತಂದೆಗಳ ತಂಡಗಳು ಬರಹತ್ತಿದವು. ಪ್ರತಿಯೊಬ್ಬರು ತಮ್ಮ ಮಗಳಿಗೆ ಈ ಸ್ಥಳವು ದೊರೆತರೆ, ನೆಟ್ಟಗಾಗುವದೆಂದು ಭಾವಿಸಿ, ಬಣ್ಣದ ಮಾತುಗಳಿಂದ ಶಾಮಸುಂದರನ ಮನಸ್ಸನ್ನು ಒಲಿಸಲು ಯತ್ನಿಸಹತ್ತಿದರು. ಅಷ್ಟರಲ್ಲಿ ಕಮಲಾಕಾಂತನ ಕಡೆಯಿಂದ ಶಾಮಸುಂದರನಿಗೆ ಒಂದು ಪತ್ರವು ಬಂತು. ಅದರಲ್ಲಿ—" ಇತ್ತ ಕಡೆಯಲ್ಲಿ ನಾವು ನಿನ್ನ ಮದುವೆಯನ್ನು ಗೊತ್ತು ಮಾಡಿರುವೆವು; ಉಳಿದ ಎಲ್ಲ ವ್ಯವಸ್ಥೆಯೂ ಮಾಡಲ್ಪ

ಟ್ಟಿದೆ. ಕಾರಣ ನೀನು ಈ ಪತ್ರವನ್ನು ಕಂಡಕೂಡಲೆ, ಹಿರಿಯರನ್ನು ಕರ ಕೊಂಡು ಹೊರಟುಬಾ. ಪುಣೆಯಿಂದ ಗದಾಧರನೂ ಗುರುನಾಥರಾಯರೂ ಬಂದಿರುವರು.'' ಎಂದು ಬರೆದಿತ್ತು. ಶಾಮಸುಂದರನು ಪತ್ರಾಭಿಪ್ರಾಯ ವನ್ನು ತನ್ನ ತಾಯಿಗೆ ತಿಳಿಸಿ, ತೀವ್ರವಾಗಿ ವಾಯಿಕ್ಷೇತ್ರಕ್ಕೆ ಹೋಗುವ ಸಿದ್ಧತೆಯನ್ನು ಮಾಡಿರೆಂದು ಹೇಳಿದನು. ಕಮಲಾಕಾಂತನ ಪತ್ರವು, ಶಾಮಸುಂದರನ ಮನೆಗೆ ಎಡತಾಕುವ ವಧುಗಳ ತಂದೆಯವರ ಮನಸ್ಸನ್ನು ನಿರಾಶೆಗೆ ಒಳಪಡಿಸಿತು.

ಒಂದೆರಡು ದಿವಸಗಳಲ್ಲಿ ರಮಾಬಾಯಿಯವರು ಅಲ್ಪ ಸ್ವಲ್ಪ ಸಿದ್ಧ ತೆಯನ್ನು ಮಾಡಿಕೊಂಡರು. ಬಳಿಕ ಎಲ್ಲರು ವಾಯಿಗೆ ಬರಲು ಹೊರಟರು. ಒಬ್ಬ ಗಾಡಿಕಾರನು ಒಂದು ಪೆಟ್ಟಿಗೆಯ ಗಾಡಿಯನ್ನು ಹೂಡಿಕೊಂಡು, ಶಾಮಸುಂದರನ ಮನೆಗೆ ಬಂದನು; ಹಾಗು ನಡೆಯಿರಿ; ಹೊತ್ತು ತೀರ ತುಸು ಉಳಿಯಿತು. ಹೊತ್ತುಂಟಲೇ ಹೋಗುವದು ನೆಟ್ಟಗೆ; ಎಂದು ಒಟ ಗುಟ್ಟಹತ್ತಿದನು. ಆಗ ಶಾಮಸುಂದರನೂ ಅವಸರ ಮಾಡಹತ್ತಿದನು. ಎಲ್ಲಿಯಾದರೂ ಊರಿಗೆ ಹೊರಟರೆ, ಹೆಂಗಸರು ತೀವ್ರವಾಗಿ ಹೊರಬೀಳು ವುದೇ ಇಲ್ಲ. ಅವರಿಗೆ ಹೇಳು; ಇವರಿಗೆ ಹೇಳು; ಎಂದು ತಡಮಾಡಹತ್ತು ತ್ತಾರೆ. ಆವರಂತೆಯೇ ರಮಾಬಾಯಿಯವರಾದರು ನೆರೆಹೊರೆಯವರಿಗೆ ಹೇಳಿ ಬರಬೇಕಾದರೆ ತುಸು ತಡವಾಯಿತು ಒಮ್ಮೆ ಎಲ್ಲರು ಬಂಡಿಯಲ್ಲಿ ಬಂದು ಕುಳಿತುಕೊಂಡರು. ಬಂಡಿ ಹೊಡೆಯುವವನು ಎತ್ತುಗಳ ಹಗ್ಗ ಗಳನ್ನು ಜಗ್ಗಿ ಬಂಡಿಯನ್ನು ಒತ್ತರದಿಂದ ಸಾಗಿಸಹತ್ತಿದನು, ದಾರಿ ಯಲ್ಲಿ ವಿಶೇಷ ಸಂಗತಿಗಳೇನೂ ವರ್ತಿಸಲಿಲ್ಲ. ಎರಡು ಮೂರು ತಾಸು ರಾತ್ರಿಯ ಸುಮಾರಕ್ಕೆ ಅವರೆಲ್ಲರು ರಘುನಾಥರಾಯರ ಮನೆಯ ಎದು ರಿನಲ್ಲಿ ಬಂದು ನಿಂತುಕೊಂಡರು. ಬಾಗಿಲು ಕಾಯುವವನು, ಇವರು ಬಂದ ಸುದ್ದಿಯನ್ನು ರಘುನಾಥರಾಯರಿಗೆ ತಿಳಿಸಲು, ಅವರು, ಗುರುನಾಥರಾ ಯರು, ಕಮಲಾಕಾಂತ, ಗದಾಧರ ಮೊದಲಾದವರು ಬಾಗಿಲಿಗೆ ಬಂದರು ನಮಸ್ಕಾರ ಕುಶಲ ಪ್ರಶ್ನೆಗಳಾಗಿ, ಗಂಡಸರು ದಿವಾಣಖಾನೆಯಲ್ಲಿ ಹೋಗಿ ಕುಳಿತುಕೊಂಡರು ರಮಾಬಾಯಿಯವರು ತಮ್ಮ ಮಗಳೊಡನೆ ಲಕ್ಷ್ಮೀಬಾಯಿಯ ( ಸೌದಾಮಿನಿಯ ) ಹತ್ತರ ಹೋಗಿ, ಮಾತಾಡುತ್ತ ಕುಳಿತುಕೊಂಡರು. ತುಸು ವೇಳೆಯಲ್ಲಿ ರಮಾಬಾಯಿಯವರ ಹೊರತಾಗಿ

ಉಳಿದವರ ಚಹಾಪಾನವಾಯಿತು. ಮುಂದೆ ಒಂಭತ್ತುವರೆ ಗಂಟೆಯ ಸುಮಾರಕ್ಕೆ ಎಲ್ಲರು ಊಟಕ್ಕೆ ಕುಳಿತುಕೊಂಡರು. ಆಗ ರಘುನಾಥರಾಯರು, ರಮಾಬಾಯಿಯವರನ್ನು ಕುರಿತು—"ಇಲ್ಲಿಯ ಶ್ರೀನಿವಾಸರಾಯರು ತಮ್ಮ ಮಗಳಾದ ಚಂಚಲೆಯನ್ನು, ನಿಮ್ಮ ಮಗನೂ, ನಮ್ಮ ಕಮಲಾಕಾಂತನ ಗೆಳೆಯನೂ ಆದ ಶಾಮಸುಂದರನಿಗೆ ಕೊಡಬೇಕೆಂದು ಗೊತ್ತುಮಾಡಿರುವರು. ಹುಡುಗೆಯು ಸುರೂಪಿಯೂ ಸುಗುಣಿಯೂ ಆಗಿರುವಳು; ಆ ಸ್ಥಳವು ನಮ್ಮ ಮನಸ್ಸಿಗೆ ಬಂದದೆ; ಲಗ್ನದ ಸಿದ್ಧತೆಯಾದರೂ ಆಗಿರುವದು. ಬರೇ ನೀವು ಹುಡುಗೆಯನ್ನು ನೋಡುವದಷ್ಟು ಉಳಿದಿದೆ" ಎಂದು ಮಾತಿನ ಪ್ರಸ್ತಾಪವನ್ನು ತೆಗೆದರು.

ರಮಾ—ನಿಮ್ಮ ಕಮಲಾಕಾಂತನಿಗೆ ಆ ಹುಡುಗೆಯನ್ನು ಏಕೆ ಮಾಡಲಿಲ್ಲ?

ರಘು—" ರಮಾಬಾಯಿ, ನಿಮಗೆ ಎಲ್ಲವೂ ಗೊತ್ತಾಗಿರಬಹುದು. ಸುಮ್ಮನೆ ಸುಟ್ಟಿದ್ದರ ಮೇಲೆ ಬರೆಯನ್ನು ಕೊಡಬೇಡಿರಿ. ಈಗ ನನ್ನ ವಿಚಾರಗಳು ಬದಲಾಗಿರುವವು ಈಗ ಒಬ್ಬ ಸಣ್ಣ ಹುಡುಗನಾದರೂ, 'ನಿಮ್ಮ ತಿಳುವಳಿಕೆಯಲ್ಲಿ ತಪ್ಪು ಅದೆ' ಎಂದು ಹೇಳಿದ ಕೂಡಲೆ, ನಾನು ಆ ಸಂಗತಿಯ ಪರ್ಯಾಲೋಚನವನ್ನು ಮತ್ತೆ ವಿಚಾರಪೂರ್ವಕವಾಗಿ ಮಾಡಹತ್ತುತ್ತೇನೆ. ವರದಕ್ಷಿಣೆಯ ಹುಚ್ಚು ಮದ್ದು ನನ್ನನ್ನು ಹಾಳು ಮಾಡಿತು! ನಾನು ಅದರ ಬಲೆಯಲ್ಲಿ ಸಿಕ್ಕದ್ದರಿಂದಲೇ ಇಂದು ಆಕೆಯನ್ನು (ಹೆಂಡತಿಯನ್ನು) ಕಳಕೊಂಡು ಕೂಡಬೇಕಾಯಿತು! ನೀವಾದರು ವರದಕ್ಷಿಣೆಯ ಮಬ್ಬಿಗೆ ಬೀಳಬೇಡರಿ" ಎಂದು ನುಡಿಯುತ್ತಿರಲು, ಅವರ ಕುತ್ತಿಗೆಯ ಶಿರಗಳು ಉಬ್ಬಿ, ಅವರಿಗೆ ಮಾತಾಡಲಿಕ್ಕೆ ಬಾರದಂತಾಯಿತು. ಮುಂದೆ ರಮಾಬಾಯಿಯವರಾದರೂ ಏನೂ ಮಾತಾಡಲಿಲ್ಲ. ಆಗ ಗುರುನಾಥರಾಯರು— ರಘುನಾಥರಾಯರೇ, ಆ ಹಿಂದಿನ ಮಾತುಗಳನ್ನೆಲ್ಲ ಬಿಟ್ಟುಬಿಡಿರಿ.

मना मानसि व्यर्थ चिंता वहाते । आकस्मात होणार होऊनि जाते ।
घडे भोगणें सर्वही कर्मयोगे । मतीमंद तो खेदमानी वियोगे ॥१॥

ತಾತ್ಪರ್ಯ:—ಆಗುವ ಭವಿಷ್ಯವು ತಪ್ಪುವದಿಲ್ಲ. ಕರ್ಮದಂತೆ ಫಲ

ವುದೊರೆಯುತ್ತದೆ. ಕಾರಣ ಚಿಂತೆಮಾಡುವವನು ಮೂರ್ಖನೆನವೆಂದು ಶ್ರೀರಾಮದಾಸಸ್ವಾಮಿಗಳು ಹೇಳಿರುವರು. ಇನ್ನು ಮುಂದೊದಗುವ ಸಂಗತಿಗಳಲ್ಲಿ ಮಾತ್ರ ಜಾಗರೂಕರಾಗಿರುವದು ಅತ್ಯವಶ್ಯವಾದದ್ದು! ನಾನೂ ನಿಮ್ಮಂತೆಯೇ ಬೇರೊಂದು ಬಲೆಯಲ್ಲಿ ಸಿಗುತ್ತಿದ್ದೆ. ಆದರೆ ಈ ತ್ರಿಮೂರ್ತಿಗಳು ನನ್ನನ್ನು ತಕ್ಕಕಾಲಕ್ಕೆ ಎಚ್ಚರಗೊಳಿಸಿದ್ದರಿಂದ ಆ ಅನಾಹುತದೊಳಗಿಂದ ನಾನು ಪಾರಾದೆನು! ಎಂದು ತಮ್ಮ ಕರ್ಮಕಥೆಯನ್ನು ಹೇಳಿದರು.

ಮಾತಿಗೆ ಮಾತು ಬೆಳೆದು ಅದು ಜಗಳದ ರೂಪವನ್ನು ಹೊಂದುತ್ತದೆಂದು ತಿಳಿದು, ಈ ವರೆಗೆ ನಮ್ಮ ತ್ರಿಮೂರ್ತಿಗಳು ಮೌನವ್ರತವನ್ನು ಕೈಕೊಂಡಿದ್ದವು. ಊಟ-ಉಡಿಗೆಗಳಾದ ಬಳಿಕ, ತುಸು ವೇಳೆ ಎಲ್ಲರೂ ಹರಟೆಯನ್ನು ಕೊಡೆದು ಹತ್ತುವರೆಯ ಗಂಟೆಗೆ ಸುಮಾರಕ್ಕೆ ನಿದ್ರಾದೇವತೆಗೆ ವಶರಾಗಿ, ಸ್ವಪ್ನ-ಸೃಷ್ಟಿಯಲ್ಲಿ ಸಂಚರಿಸಹತ್ತಿದರು.

ಮರುದಿವಸ ರಮಾಬಾಯಿಯವರು ಶ್ರೀನಿವಾಸರಾಯರ ಮಗಳಾದ ಚಂಚಲೆಯನ್ನು ನೋಡಿಬಂದು, ರಘುನಾಥರಾಯರ ಮಾತಿಗೆ ಸಮ್ಮತಿಯನ್ನಿತ್ತರು. ಬಳಿಕ ತಿಥಿ ನಿಶ್ಚಯವಾಗಿ ಒಂದು ಸುಮುಹೂರ್ತದ ಮೇಲೆ ಶಾಮಸುಂದರನ ಮದುವೆಯಾಯಿತು. ವಿವಾಹ—ಸಂಭ್ರಮವನ್ನು ವರ್ಣಿಸಿ ನಾವು ವಾಚಕರ ವೇಳೆಯ ಅಪವ್ಯಯವನ್ನು ಮಾಡುವದಿಲ್ಲ. ಶಾಮಸುಂದರನು ನಮ್ಮ ತ್ರಿಮೂರ್ತಿಗಳಲ್ಲಿಯ ಒಬ್ಬನಾಗಿದ್ದದರಿಂದಲೂ ಆತನ ಮತಗಳ ತಾತ್ಪರ್ಯವು ಈ ಮೊದಲೇ ವಾಚಕರಿಗೆ ಗೊತ್ತಾಗಿರುವದರಿಂದಲೂ ಆವನ ಸಮ್ಮತಿಯಂತೆಯೇ ವಿವಾಹ ಸಮಾರಂಭವಾಯಿತೆಂದು ಹೇಳಿಬಿಡುವೆವು ರಮಾಬಾಯಿಯವರು ತಮ್ಮ ಸೊಸೆಯ ಹೆಸರನ್ನು ಸರಸ್ವತಿ ಎಂದು ಇಟ್ಟರು. ಶ್ರೀನಿವಾಸರಾಯರೂ ಅವರ ಪತ್ನಿಯರಾದ ಲಕ್ಷ್ಮೀಬಾಯಿಯವರೂ ಈಗ ಒಂದು ದೊಡ್ಡ ಕುತ್ತವನ್ನು ದಾಟಿದಂತಾಯಿತು. ಮಗಳ ಮದುವೆಯನ್ನು ಮಾಡಿದರೆ ಇದರಲ್ಲಿ ವಿಶೇಷವೇನೆಂದು ಯಾರಾದರೂ ಶಂಕಿಸಬಹುದು. ಅವರಿಗೆ ಸಮಾಧಾನವೆಂದರೆ :-ಯಾರಿಗೆ ಹುಡುಗೆಯರಿರುವರೋ, ಅವರಿಗೇ ಆ ಮಾತಿನ ಅನುಭವವು! ಅನ್ಯರು ಅದನ್ನು ಅರಿಯಲಾರರು. ಇತರರು 'मिष्टान्नमितरेजनाः' ಸವಿ-ಕೂಳು ತಿನ್ನಬೇಕಷ್ಟೇ! ಇದೇನು ಸಟೆಯಲ್ಲ. ಕಾಲೊಳಗೆ ಜೋಡುಗಳನ್ನು ಹಾಕಿ

ಕೊಂಡು ನಡೆಯುವವನಿಗೆ, ಬರೆಗಾಲಿನಿಂದ ನಡೆಯುವವನ ಕಾಲುಗಳು ಹೇಗೆ ಸುಡುತ್ತವೆ. ಸುಗ್ರಾಸ ಭೋಜನವನ್ನು ಮಾಡುವವರಿಗೆ, ಬಡವರು ಹಣಕ್ಕಾಗಿ ಮನೆ ಮನೆ ತಿರಗುವಾಗ ಅವರಿಗೆ ಎಷ್ಟು ದುಃಖವಾಗುತ್ತದೆ, ಧನವಂತರಿಗೆ ಬಡವರು ಹಣಕ್ಕಾಗಿ ಹೇಗೆ ಬಾಯಿಬಿಡುತ್ತಾರೆ, ಮೊದಲಾದ ಸಂಗತಿಗಳ ಕಲ್ಪನೆಯು ಆಗಲಾರದು ಪ್ರತಿಯೊಬ್ಬರು ತಮ್ಮ ಸ್ಥಿತಿಯ ಮೇಲಿಂದ ಜಗತ್ತಿನ ಸ್ಥಿತಿಯ ಕಾಯಾಸವನ್ನು ಕಟ್ಟುತ್ತಾರೆ. ಕಾಮಿಣಿ ಎಂಬ ರೋಗವಾದವನಿಗೆ ಜಗತ್ತೆಲ್ಲ ಹಳದೀ ಬಣ್ಣದ್ದಾಗಿ ತೋರುತ್ತದೆ. ಸವಿಯೂಟವನ್ನು ಉಣ್ಣುವವರಿಗೆ ಜಗವೆಲ್ಲ ಸವಿಯೂಟವನ್ನೆ ಉಣ್ಣುವಂತೆ ತೋರುತ್ತದೆ. ಆದರೆ ಆ ಅನ್ನದ ಮಬ್ಬಿನಿಂದ ಮದಾಂಧರಾದವರಿಗೆ ತಮ್ಮ ಸುತ್ತುಮುತ್ತಲು, ಅನ್ನದ ಸಲುವಾಗಿ ಬಾಯಿಬಿಡುತ್ತ ಕುಳಿತಂಥ, ಅದು ದೊರೆಯದ್ದರಿಂದ ಜೀವಕ್ಕೆ ಎರವಾಗುತ್ತಿರುವಂಥ, ದೈವಗೇಡಿಗಳಾದ ಪರಮೇಶ್ವರನ ಮಕ್ಕಳ ಅರಿವು ಸಹ ಇರುವದಿಲ್ಲ ಅವರು ಇಂಥವರನ್ನು ಕಣ್ಣೆತ್ತಿ ಸಹ ನೋಡುವದಿಲ್ಲ, ಇದೇ ಸ್ಥಿತಿಯು ಸಣ್ಣ ಪುಟ್ಟ ಕೆಲಸಗಳಲ್ಲಿಯೂ ಸಹ ಕಂಡು ಬರುತ್ತದೆ. ತತ್ವೋಪದೇಶವನ್ನು ಮಾಡಲಿಕ್ಕೆ ಪ್ರತಿಯೊಬ್ಬರಿಗೆ ಬರುತ್ತದೆ; ಆದರೆ ಅವರ ಆಚರಣವು ಮಾತ್ರ ಅದರಂತೆ ರುವದಿಲ್ಲ. ಕಣ್ಣಿಗೂ ಕಿವಿಗೂ ನಾಲ್ಕೇ ಬಟ್ಟುಗಳ ಅಂತರವಿರುತ್ತದೆ. ಆದರೆ ಕಿವಿಯಿಂದ ಕೇಳುವದರಲ್ಲಿಯೂ ಕಣ್ಣಿನಿಂದ ನೋಡುವದರಲ್ಲಿಯೂ ಭೂವ್ಯಾಕಾಶದಷ್ಟು ಹೆಚ್ಚು ಕಡಿಮೆ ಇರುತ್ತದೆ ಕಲಿಸುವದಕ್ಕಿಂತ ಕಲಿಯುವದೂ ಗುರುವಾಗಿ ಶಿಷ್ಯನಿಗೆ ಶಿಕ್ಷಿಸುವದಕ್ಕಿಂತ ಶಿಷ್ಯನಾಗಿ ಗುರೂಪದೇಶದಂತೆ ನಡೆಯುವದೂ ಬಲು ಬಿಗಿಯಾದ ಕೆಲಸವು. ಅದರಂತೆ ಹುಡುಗೆಯರ ತಾಯಿ ತಂದೆಗಳಿಗಾಗುವ ಕಷ್ಟ ತಾಪಗಳ ಅನುಭವವು ಬರಿಯ ಗಂಡುಮಕ್ಕಳ ತಾಯಿ—ತಂದೆಗಳಿಗೆ ಬರಲಾರದು. ಅವರು ಯಾವಾಗ ಹೆಣ್ಣುಮಕ್ಕಳ ತಾಯಿ-ತಂದೆಗಳಾಗುವರೋ ಆಗ್ಯೆ ಅದು ತಿಳಿಯುವದು. ಎಲೈ ಪರಮೇಶ್ವರನೇ ಬರೇ ಗಂಡುಮಕ್ಕಳುಳ್ಳವರ ಗರ್ವವನ್ನು ಹರಣ ಮಾಡುವದಕ್ಕಾಗಿ ಅವರನ್ನು ಒಮ್ಮೆಯಾದರೂ ಹೆಣ್ಣು ಮಕ್ಕಳ ತಂದೆಯವರನ್ನಾಗಿ ಮಾಡು ಎಂದು ಹುಡುಗೆಯರ ತಂದೆಗಳ ದೆಸೆಯಿಂದ ಈ ಲೇಖಕನು ನಿನ್ನನ್ನು ಅನನ್ಯಭಾವದಿಂದ ಬೇಡಿಕೊಳ್ಳುವನು.

ಹೆಣ್ಣುಮಕ್ಕಳ ತಂದೆಗಳೇ! ನೀವು ಅಣುಮಾತ್ರವಾದರೂ

ದುಃಖಿಸಬೇಡಿರಿ; ಸುಖದ ಹಿಂದಿಂದೆ ದು.ಖವೂ ದುಃಖದ ಹಿಂದಿಂದೆ ಸುಖ ವೂ ಹೀಗೆ ಸುಖ—ದುಃಖಗಳ ಚಕ್ರವು ಒಂದೇ ಸವನೇತಿರಗುತ್ತಿರುವವು ಇಂದಿಲ್ಲ ನಾಳೆ ನಿಮಗೆ ಸುಖದ ದಿವಸಗಳು ನಿಶ್ಚಯದಿಂದ ಬರುವವು, ಮಾತ್ರ ಇಷ್ಟುಕಾಲದ ಹಾದಿಯನ್ನು ನೋಡಲಿಕ್ಕೆ ಬೇಕು?. ಅದಕ್ಕೆ ಉಪಾಯ ವಿಲ್ಲ. ಅನೂಕೂಲವಾದ ವೇಳೆಯು ಒದಗಿತೆಂದರೆ ಎಲ್ಲ ಕೆಲಸಗಳು ಸುಸೂತ್ರದಿಂದ ಜರಗುವವು. ಬರೇ ಗಕಡುಮಕ್ಕಳ್ಳುಳ್ಳ ಹಾಗು ವರದಕ್ಷಿಣೆಯ ಸಲುವಾಗಿ ಬಾಯಿಬಿಡುವಂಥ ಜನರೇ, ನೀವು ತೀವ್ರವಾಗಿ ಜಾಗ್ರತರಾಗಿ ನಿಮ್ಮ ನೀತಿಯನ್ನು ತಿದ್ದಿಕೊಳ್ಳಿರಿ; ಇಲ್ಲದಿದ್ದರೆ ನ್ಯಾಯಪಕ್ಷಪಾತಿಯಾದ ಪರಮೇಶ್ವರನು, ನಿಮ್ಮನ್ನು ಶಿಕ್ಷಿಸದೆ ಎಂದೂ ಬಿಡಲಾರನು! ನೀವು ನಿಮ್ಮ ವರ್ತನವನ್ನು ಸುಧಾರಿಸದಿದ್ದರೆ, ನಿಮ್ಮ ಶಾಸನ ಮಾಡುವದಕ್ಕಾಗಿ ಪರಮಾತ್ಮನಿಗೆ ಬೇರೆ ಅವತಾರವನ್ನು ಧಾರಣ ಮಾಡಬೇಕಾಗುವದು. ರಾವಣನ ಗರ್ವಹರಣಕ್ಕಾಗಿ, ರಾಮಾವತಾರವಾಯಿತು. ಕಂಸಾಸುರನ ಗರ್ವಹರಣಕ್ಕಾಗಿ, ಕೃಷ್ಣಾವತಾರವಾಯಿತು; ಅದರಂತೆ ವರದಕ್ಷಿಣಾ ಗರ್ವಹರಣಕ್ಕಾಗಿ 'ವರದಕ್ಷಿಣಾರಿ' ಎಂಬ ಅವತಾರವಾಗುವದು! ಇನ್ನು ಈ ವಿನೋದವು ಸಾಕು. ಪ್ರಿಯಬಾಂಧವರೇ! ನಾವಂತೂ ಹೇಳುವಷ್ಟು ಹೇಳಿದೆವು; ಇನ್ನು ನಿಮ್ಮ ಮನಬಂದಂತೆ ಮಾಡಿರಿ!

ಇಂದಿಗೆ ಶಾಮಸುಂದರನ ಮದುವೆಯಾಗಿ ಹದಿನೈದು ದಿವಸಗಳಾಗಿದ್ದವು. ರಮಾಬಾಯಿಯವರು ತಮ್ಮ ನೊಸೆಯನ್ನು ಕರೆದುಕೊಂಡು ಕರ್ಹಾಡಕ್ಕೆ ಹೋಗಿದ್ದರು. ರಘುನಾಥರಾಯರು, ಗುರುನಾಥರಾಯರು, ಶ್ರೀನಿವಾಸರಾಯರು, ಕಮಲಾಕಾಂತ, ಶ್ಯಾಮಸುಂದರ ಮತ್ತು ಗದಾಧರ ಮೊದಲಾದವರು ಮಾತಾಡುತ್ತ ಕುಳಿತಿದ್ದರು ಸಮಾಜಸುಧಾರಣೆಯ ಬಗ್ಗೆ ಪರಸ್ಪರರಲ್ಲಿ ವಾದವಿವಾದವು ಒಳ್ಳೇ ಭರದಿಂದ ನಡೆದಿತ್ತು. ಇನ್ನು ಮೇಲೆ ನಮ್ಮ ತ್ರಿಮೂರ್ತಿಗಳು ಏನು ಮಾಡಬೇಕು? ಯಾವ ಕಾರ್ಯವನ್ನು ಕೈಕೊಳ್ಳಬೇಕು, ಇವೇ ಪ್ರಶ್ನೆಗಳ ಮೇಲೆ ಚರ್ಚೆಯು ನಡೆದಿತ್ತು; ಕಡೆಗೆ ಎಲ್ಲರ ಅನುಮತಿಯಿಂದ ಒಂದು ವಿಚಾರವು ಗೊತ್ತಾಗಿ, ಅದಕ್ಕೆ ಬೇಕಾಗುವ ಸಾಧನಗಳ ಸಂಗ್ರಹವನ್ನು ಮಾಡುವದಕ್ಕಾಗಿಯೂ, ಗೊತ್ತಾದ ಪ್ರಕಾರ ಕಾರ್ಯಾರಂಭವನ್ನು ಮಾಡಿ ಕೆಲಸವನ್ನು ಸಾಗಿಸುವದಕ್ಕಾಗಿಯೂ ನಮ್ಮ ತ್ರಿಮೂರ್ತಿಗಳು ಪುಣೆಗೆ ಹೋಗಬೇಕೆಂದು ಗೊತ್ತಾ

ಯಿತು. ಅಷ್ಟರಲ್ಲಿ ನಮ್ಮ ತ್ರಿಮೂರ್ತಿಗಳ ಬಿ ಎ. ಪರೀಕ್ಷೆಯು ಪಾಸಾದ ವರ್ತಮಾನವು ತಂತಿಯಿಂದ ಬಂತು. ಆಗ ಎಲ್ಲರಿಗೂ ವಿಶೇಷ ಆನಂದವಾಯಿತು ನಮ್ಮ ತ್ರಿಮೂರ್ತಿಗಳು ಕೈಕೊಂಡ ಕಾರ್ಯಕ್ಕೆ ಇದೊಂದು ಶುಭಶಕುನವಾಯಿತೆಂದೇ ತಿಳಿಯಬೇಕು! ಗೊತ್ತಾದ ಪ್ರಕಾರ ಮೂರನೇ ದಿವಸ ಕಮಲಾಕಾಂತ, ಶಾಮಸುಂದರ ಮತ್ತು ಗದಾಧರ ಹೀಗೆ ಮೂವರು ಗುರುನಾಥರಾಯರೊಡನೆ ಪುಣೆಗೆ ಪ್ರಯಾಣವನ್ನು ಬೆಳಿಸಿದರು — ಹಾಗು ಅಲ್ಲಿ ಮುಟ್ಟಿತ್ತಲೇ. 'ಸಮಾಜಸೇವೆ' ಎಂಬ ಸಂಸ್ಥೆಯನ್ನು ಸ್ಥಾಪಿಸಿ, ಅದರಮುಖಾಂತರವಾಗಿ, ವರದಕ್ಷಿಣೆಯ ಪ್ರತಿಬಂಧಕ್ಕೆ ಆರಂಭಮಾಡಿದರು.

---

## ೧೫ ನೆಯ ಪ್ರಕರಣ.

## ಪ್ರತ್ಯಕ್ಷ ಕಾರ್ಯಾರಂಭ.

**ಆಡದೇ ಮಾಡುವವ ರೂಢಿಯೊಳಗುತ್ತಮನು ।**
**ಆಡಿ ಮಾಡುವನು ಮಧ್ಯಮನಧಮತಾ ॥**
**ನಾಡಿ ಮಾಡದವ ಸರ್ವಜ್ಞ ॥ ೧ ॥**

ಈ ಸರ್ವಜ್ಞನ ಉಕ್ತಿಯ ಮರ್ಮವನ್ನರಿತುಕೊಂಡೇ ನಮ್ಮ ತ್ರಿಮೂರ್ತಿಗಳು ತಮ್ಮ ಕಾರ್ಯಕ್ಕೆ ಕೈಹಾಕಿದ್ದವು. ಆವು ತಮ್ಮ 'ಸಮಾಜಸೇವೆ' ಎಂಬ ಸಂಸ್ಥೆಗೆ ಸ್ಥಿರಸ್ವರೂಪವನ್ನು ಕೊಡುವದಕ್ಕಾಗಿ ವರದಕ್ಷಿಣಾಫಂಡ ಎಂಬದೊಂದು ಫಂಡವನ್ನು ಕೂಡಿಸಹತ್ತಿದವು. ಎಲ್ಲಕ್ಕೂ ಮೊದಲು ರಘುನಾಥರಾಯರು ಈ ಫಂಡಿಗೆ ಎರಡು ಸಾವಿರರೂಪಾಯಿಗಳನ್ನು, ಗುರುನಾಥರಾಯ ರು ಒಂದುವರೆ ಸಾವಿರರೂಪಾಯಿಗಳನ್ನೂ, ಶಾಮಸುಂದರನು ತನ್ನ ಮಾವಂದಿರಾದ ಶ್ರೀನಿವಾಸರಾಯರ ಕಡೆಯಿಂದ ಸ್ವಸಂತೋಷದಿಂದ ತನಗೆ ದೊರೆತ ಸಾವಿರ ರೂಪಾಯಿಗಳನ್ನೂ ಕೊಟ್ಟರು.

ಆರಂಭದಲ್ಲಿಯೇ ಈ ಫಂಡಿಗೆ ನಾಲ್ಕುವರಿ ಸಾವಿರ ರೂಪಾಯಿಗಳು ದೊರೆತದ್ದರಿಂದ ಹಣದ ಅನನುಕೂಲತೆಯೇನೂ ಉಳಿಯಲಿಲ್ಲ ವಾಚಕರೇ, ಸಮಾಜದ ಕಲ್ಯಾಣದ ನಿಜವಾದ ಹೇತುವಿನಿಂದಲೂ ನಿಃಸ್ವಾರ್ಥಬುದ್ಧಿಯಿಂದಲೂ ಪ್ರೇರಿತವಾದ ಅಂತಃಕರಣಗಳ ಕೈ ಯಿಂದ ಈ ಹಣದ ಉಪಯೋಗವು ಸಮಾಜಕ್ಕೆ ಅಂಟಿಕೊಂಡ ರೋ

ರೂಪಿಯಾದ ರೋಗವನ್ನು ಹೋಗಲಾಡಿಸುವ ಕೆಲಸದಲ್ಲಿ ಆಗಲಿಕ್ಕಿಲ್ಲವೇ? ಅದರಂತೆ ಸಮಾಜವು ಅಧೋಗತಿಯ ಕಡೆಗೆ ಹೋಗುತ್ತಿರಲು, ಅದನ್ನು ನರದೇಹದ ಸಾರ್ಥಕವೆಂಬ ಮಂದಿರದ ಕಡೆಗೇರಿಗಿಸುವ ಕಾರ್ಯದಲ್ಲಿ ಈ ಹಣದ ಉಪಯೋಗವಾಗಲಿಕ್ಕಿಲ್ಲವೇ? ನಿಶ್ಚಯವಾಗಿ ಆಗುವದು!

ಸಮಾಜ ಸಂಸ್ಥೆಯನ್ನು ಸ್ಥಾಪಿಸುವ ಕಾಲಕ್ಕೆ ಕಮಲಾಕಾಂತನು ಮಾಡಿದ ಭಾಷಣವು ಬಹಳೇ ವಿಚಾರಣೀಯವಾದದ್ದಿರುವದು. ಅದರ ತಾತ್ಪರ್ಯ ವೇನೆಂದರೆಃ—

" ಪರಮೇಶ್ವರನು ಪಂಚಮಹಾಭೂತಗಳನ್ನು ನಿರ್ಮಾಣಮಾಡಿದ ಬಳಿಕ ಸಾವಿರಾರು ಜೀವರೂಪಿಯಾದ ಚಿತ್ರಗಳನ್ನು ಸಿದ್ಧಪಡಿಸಹತ್ತಿದರೂ ಕೊನೆಗೆ ಆ ಚಿತ್ರಕಲೆಯ ಪರಿಣತಿಯು ಮನುಷ್ಯದೇಹದಲ್ಲಾಯಿತು. ಜಗತ್ತಿನಲ್ಲೆಲ್ಲ ಮನುಷ್ಯ ಚಿತ್ರವೇ ಮೇಲಾದದ್ದು, ಪೂರ್ಣತೆಯುಳ್ಳದ್ದೂ ಇರುತ್ತದೆ. ಮಿಕ್ಕ ಚಿತ್ರಗಳು ಅದನ್ನೆ ಮುಂದಿಟ್ಟುಕೊಂಡು ತಮ್ಮೊಳಗಿನ ಕುಂದು ಕೊರತೆಗಳನ್ನು ಪುರೈಸಿಕೊಳ್ಳಬೇಕೆಂಬ ಹೇತುವಿನಿಂದಲೇ ಆ ಜಗಚ್ಚಿತ್ರದರ್ಶಕನಾದ ಜಗದೀಶನು ಮನುಷ್ಯನ ಚಿತ್ರವನ್ನು ಇಷ್ಟು ಪೂರ್ಣವಾಗಿ ತಯಾರಿಸಿದಂತೆ ತೋರುತ್ತದೆ. ಇರಲಿ, ಈ ಮನುಷ್ಯರೂಪ ಚಿತ್ರಕ್ಕೆ ಜೀವರೂಪವಾದ ಚೈತನ್ಯವು ದೊರೆತದ್ದರಿಂದ ಅದು ಕಂಡ ಕಡೆಗೆ ಓಡಹತ್ತಿದೆ ಅವಕ್ಕೆ ಎಲ್ಲಿ ನಿಲ್ಲಬೇಕೆಂಬುವದು ಗೊತ್ತು ಇಲ್ಲ. ಆದ್ದರಿಂದ ಅದು ಓಡಿ ಓಡಿ ಕಡೆಗೆ ಅವನತಿಯೆಂಬ ಬಾವಿಯಲ್ಲಿ ನಿಶ್ಚಯವಾಗಿ ಬೀಳುವದು. ಈ ಮನುಷ್ಯ ಚಿತ್ರದ ಅನುಕರಣವನ್ನೇ ಮಿಕ್ಕ ಚಿತ್ರಗಳು ಮಾಡುತ್ತಿರುವವು. ಕಾರಣ ಚಿತ್ರರೂಪಿಗಳಾ ಮನುಷ್ಯರೇ, ಜಾಗೃತರಾಗಿರಿ. ಕಾಲಕ್ಕೆ ಸರಿಯಾಗಿ ನೀವು ಜಾಗೃತರಾಗದಿದ್ದರೆ, ನಿಮಗೆ ನಿಮಗಿಂತ ಕಡಿಮೆ ಯೋಗ್ಯತೆಯುಳ್ಳ ಪ್ರಾಣಿಗಳ ಕೈಯಿಂದ ನೀರು ಕುಡಿಯುವ ಹೊತ್ತು ನಿಶ್ಚಯವಾಗಿ ಬರುವದು. ಕಾರಣ ಎಚ್ಚರಾಗಿರಿ, ನರದೇಹದಲ್ಲಿ ನಿಜವಾದ ಸಾರ್ಥಕತ್ವ ಯಾತರಲ್ಲಿದೆಂಬದನ್ನು ಗೊತ್ತು ಮಾಡಿಕೊಳ್ಳಿರಿ. ನಿಮಗಿಂತು ಕಡಿಮೆ ಯೋಗ್ಯತೆಯುಳ್ಳ ಪ್ರಾಣಿಗಳಿಗೆ ಒಪ್ಪುವಂಥ ಭೀಷಣ ಕೃತ್ಯಗಳನ್ನು ಮಾಡಬೇಡಿರಿ! ಕ್ಷುದ್ರ ಪ್ರಾಣಿಗಳ ಪ್ರಾಣ-ಹರಣವನ್ನು ಮಾಡಿ, ರಕ್ತದ ಕಾವಲಿಗಳನ್ನು ಹರಿಸುವಂಥ ಭೀಷಣ-ಕೃತ್ಯಗಳು ವ್ಯಾಘ್ರ, ಸಿಂಹ ಮೊದಲಾದ ಹಿಂಸ್ರಪಶುಗಳಿಗೇ ಒಪ್ಪುವವು; ಆದರೆ ಅಂಥ ಕೃತ್ಯಗಳನ್ನು

ನೀವು ಮಾಡಿದರೆ, ನಿಮ್ಮ ಮೋರೆಗೆ ಮಸಿ ಹತ್ತುವದು! ಯಾವ ಕೃತ್ಯ ಗಳನ್ನು ನೋಡಿ, ಭಯವುಂಟಾಗಿ ರೋಮಾಂಚಗಳೇಳುತ್ತವೆಯೋ ಅಂಥ ಕೃತ್ಯಗಳಿಗೆ ಭೀಷಣ ಕೃತ್ಯಗಳೆನ್ನುತ್ತಾರೆ! ಸದ್ಯಕ್ಕೆ ನಮ್ಮ ಸಮಾಜದಲ್ಲಿ ಈ ಬಗೆಯ ಎಷ್ಟೋ ಕೃತ್ಯಗಳು ಒದಗುತ್ತಿರುವವು. ಬಡ ಪ್ರಾಣಿ ಯಾದ ಆಕಳನ್ನು ಕಟುಕನು ಕಟ್ಟಿಕೊಂಡು ಹೋಗುವಾಗ ಅದರ ಪ್ರತೀಕಾರವನ್ನು ಮಾಡದೆ, ಅವನ್ನು ಆತನ ಕೈಯೊಳಗಿಂದ ಬಿಡಿಸಿಕೊಳ್ಳದೆ, ಬರೇ ಮೋಜು ನೋಡುತ್ತ ನಿಲ್ಲುವದು ಯೋಗ್ಯವೇ! ಸ್ವಂತ ಮಗನ ಮೈಮೇಲೆ ಏನಾ ದರು ಪ್ರಸಂಗ ಬಂದಾಗ ಅವನ ಮನೆಯವರು, ಆತನನ್ನು ಬಿಡಿಸಿಕೊಳ್ಳ ಲಿಕ್ಕೆ ಹೇಗೆ ಯತ್ನಿಸುತ್ತಾರೋ, ಅದರಂತೆಯೆ ಸಮಾಜದಲ್ಲಿ ಯಾವದೊಂ ದು ಭೀಷಣ–ಕೃತ್ಯವು ನಡೆಯುತೆಂದರೆ, ಅದನ್ನು ಪ್ರತಿಬಂಧಿಸಲಿಕ್ಕೆ ಎಲ್ಲರು ನಡಕಟ್ಟಿ ನಿಲ್ಲಲಿಕ್ಕೆ ಬೇಕು ಈಗ ನಾವು ಸಮಾಜದಲ್ಲಾಗುವ ಭೀಷಣಕೃತ್ಯಗಳನ್ನು ಪ್ರತಿಬಂಧಿಸಬೇಕೆಂಬ ಹೇತುವಿನಿಂದಲೇ ನಡಕಟ್ಟಿ ನಿಂತಿರುವೆವು, ಯಶಾಪಯಶಗಳ ಚಿಂತೆಯು ನಮಗಿಲ್ಲ!; ಇಂಥ ಸಾರ್ವಜ ನಿಕ ಕೆಲಸಗಳು ಒಬ್ಬಿಬ್ಬರಿಂದ ಆಗಲಾರವು 'ಹತ್ತೂರ ಹಲಕಡ್ಡಿ ಒಬ್ಬನ ತಲೆ ಹೊರೆ' ಎಂಬಂತೆ ಎಲ್ಲರೂ ಸಹಾಯಮಾಡಲಿಕ್ಕೆಬೇಕು. ಸ್ವಲ್ಪ ಸಹಾ ಯವನ್ನು ಮಾಡಿದರೂ ಚಿಂತೆಯಿಲ್ಲ! ಮಾತ್ರ ಅದರಲ್ಲಿ ಸ್ವಾರ್ಥದ ಬೀಜ ವು ಇರಕೂಡದು! ಯಾವದೊಂದು ಕೋಟೆಯನ್ನು ತಕ್ಕೊಳ್ಳಬೇಕಾದರೆ, ಅದು ಒಮ್ಮೆಲೆ ಕೈವಶವಾಗುವದಿಲ್ಲ. ಅದರ ಮಾರ್ಗವನ್ನು ಕ್ರಮಕ್ರಮವಾಗಿಯೇ ಆಕ್ರಮಿಸಲಿಕ್ಕೆಬೇಕು. ಇದರಂತೆಯೇ ಮಿಕ್ಕ ಸಂಗತಿಗಳ ಸ್ಥಿತಿಯಿರುವದು. ನನ್ನ ಪ್ರಿಯ ಬಾಂಧವರೇ, ಈಗ ನಮ್ಮ ಸಮಾಜದಲ್ಲಿ ನೆಲೆಗೊಂಡ ಹಾಗು ಭೀಷಣಕೃತ್ಯವಾದ ವರದಕ್ಷಿಣೆಯಂಥ ಕೆಟ್ಟ ರೂಢಿಯನ್ನು ನಿರ್ಮೂಲ ಮಾಡಲಿಕ್ಕೆ ಯತ್ನಿಸೋಣ. ಈ ರೂಢಿಯ ಮೂಲಕ ಎಷ್ಟೋ ಭೀಷಣ ಕೃತ್ಯಗಳು ಆಗುತ್ತಿರುವವು ( ಇಲ್ಲಿ ಗೋವಿಂದರಾಯರ ಕಥೆಯನ್ನು ಹೇಳಿ ದರು ). ಮತ್ತು ಅವುಗಳ ಪ್ರತಿಬಂಧಕ್ಕಾಗಿಯೇ, ಈ ಸಮಾಜ ಸಂಸ್ಥೆಯ ಜನ್ಮವಾಗಿರುವದು.? ಇದೇ ಮಾದರಿಯ ಶಾಮಸುಂದರ, ಗದಾಧರ, ರಘುನಾಥರಾಯರು, ಗುರುನಾಥರಾಯರು ಇವರೇ ಮೊದಲಾದ ಮುಖಂ ಡರ ಭಾಷಣಗಳಾದವು. ಸಭಾಸ್ಥಾನವು ಜನರಿಂದ ಬಿಗಿದು ನಿಂತಿತ್ತು? ಸಭೆಗೆ ಚಿಕ್ಕ ದೊಡ್ಡ, ಸುಶಿಕ್ಷಿತ ಅಶಿಕ್ಷಿತ, ಶ್ರೀಮಂತ ಬಡವ ಹೀಗೆ ಎಲ್ಲತರದ

ಜನರು ಬಂದಿದ್ದರು. ಸಭೆಯಲ್ಲಿ ವರದಕ್ಷಿಣೆ ಫಂಡಿಗೆ ಐನೂರು ರೂಪಾಯಿಗಳು ದೊರೆತವು! ಅಲ್ಲದೆ ಹಣದ ಸಹಾಯವನ್ನು ಮಾಡುತ್ತೇವೆಂದು ವಿಶ್ವಾಸಪೂರ್ವಕವಾದ ಆಶ್ವಾಸನವನ್ನು ಕೊಟ್ಟರು. ತಾತ್ಪರ್ಯ:— ನಮ್ಮ ತ್ರಿಮೂರ್ತಿಗಳು, ತಮ್ಮ ಮನಸ್ಸೆಂಬ ಉಂಗುರಕ್ಕೆ 'ಆಡಿದಂತೆ ಮಾಡು.' ಎಂಬ ತತ್ವದ ಹರಳನ್ನು ಕೂಡಿಸಿದಂತಾಯಿತು! ಸಮಾಜ ಸೇವೆಯ ಕಾರ್ಯವು ಭರದಿಂದ ಸಾಗಹತ್ತಿತು.

## ಉಪಸಂಹಾರ.

ಅನಾದ್ಯನಂತನಾದ ಪರಮೇಶ್ವರನಿಗೂ ಕಾಲಕ್ಕೂ ಆದ್ಯಂತಗಳಿಲ್ಲ. ಉಳಿದ ವಸ್ತುಗಳಿಗೆ ಆದ್ಯಂತಗಳುಂಟು. ನಾವು ಒಂದು ಅರಮನೆಯನ್ನು ಕಟ್ಟಲಿಕ್ಕೆ ಆರಂಭಿಸಿದ್ದೇವೆಂದು ತಿಳಿಯೋಣ. ಇಂದು ನಾಲ್ಕು ಅಂತಸ್ತುಗಳಾದವು; ಇನ್ನು ಮುಂದೆ ಕೆಲವು ದಿವಸಗಳ ಮೇಲೆ ಎಂಟು ಆದವು; ಹನ್ನೆರಡು ಆದವು; ಹೀಗೆಯೇ ನಾವು ಎಷ್ಟು ಅಂತಸ್ತುಗಳನ್ನು ಕಟ್ಟಬಹುದು! ಒಂದು ದಿವಸ ಆ ಅಂತಸ್ತಿನ ಕೆಲಸವನ್ನು ಮುಗಿಸಿ, ಇದು ಕೊನೆಯ ಅಂತಸ್ತುವಾಯಿತೆಂದು ಹೇಳಲೇ ಬೇಕಾಗುವದು. ಅದರಂತೆ ನಾವು ಈ ನಮ್ಮ ಕಥೆಯನ್ನು ಮುಗಿಸಿ, ಉಪಸಂಹಾರವೆಂಬ ಕೊನೆಯ ಅಂತಸ್ತನ್ನು ಕಟ್ಟಿ, ಭೀಷಣ-ಕೃತ್ಯವಾದ ವರದಕ್ಷಿಣೆಯ ಚಿತ್ರವುಳ್ಳ ಹದಿನೈದು ಅಂತಸ್ತುಗಳಿಂದ ಕೂಡಿದ "ವರದಕ್ಷಿಣೆ" ಎಂಬ ಹೆಸರಿನ ಈ ಪುಸ್ತಕರೂಪಿಯಾದ ಅರಮನೆಯನ್ನು ವಾಚಕರ ಸಂಚಾರಾರ್ಥವಾಗಿ, ಅವರ ವಶಕ್ಕೆ ಕೊಡುತ್ತೇವೆ. ಅವರು ಇದರಲ್ಲಿ ಮನಬಂದಂತೆ ಸಂಚಾರಮಾಡಲಿ!

ಗದಾಧರನು ಶೀಘ್ರವಾಗಿಯೇ ಸಮಾಜದ ಸೂಚನೆಯ ಮೇರೆಗೆ ತನ್ನ ವಿವಾಹವನ್ನು ಮಾಡಿಕೊಂಡನು. ಅವನ ಹೆಂಡತಿಯ ಹೆಸರು ಸಾವಿತ್ರಿಬಾಯಿ. ಲಕ್ಷ್ಮಿ, ಸರಸ್ವತಿ, ಮತ್ತು ಸಾವಿತ್ರಿ ಈ ತ್ರಿನದಿಗಳ ಸಂಗಮವು ಯಾವ ಸ್ತ್ರೀಗೆ ಪವಿತ್ರವಾಗಿ ತೋರಲಿಕ್ಕಿಲ್ಲ? ಸುಜ್ಞರಾದ ಪತಿಗಳ ಸುಗೃಹಿಣಿಯಾದ ಈ ಮೂವರು ಯಾವ ಸಮಾಜದಲ್ಲಿರುವರೋ ಅದರ ಉನ್ನತಿಯಾಗಲಿಕ್ಕೆ ಎಷ್ಟು ವೇಳೆ ಬೇಕಾಗುವದು?

ನಮ್ಮ ತ್ರಿಮೂರ್ತಿಗಳು ತಮ್ಮ ತಮ್ಮ ಪತ್ನಿಯರಿಂದೊಡಗೂಡಿ ಸದ್ಯಕ್ಕೆ ಸಮಾಜಸೇವೆಯ ಕಾರ್ಯವನ್ನು ಒಳ್ಳೇ

ಕಸುವಿನಿಂದಲೂ ಸಾಗಿಸುತ್ತಿರುವರು. ಸಮಾಜಕ್ಕೆ ಅವುಗಳ ಕಾರ್ಯದಕ್ಷತೆಯೂ ಮನವರಿಕೆಯಾಗಿ ದಿನವೊಂದಕ್ಕೆ ಸಮಾಜ ಕ್ಷೇತ್ರವು ಬೆಳೆಯುತ್ತಿರುವದು. ಇದೇ ಸಮಾಜ ಸೇವೆಯ ಸಂಸ್ಥೆಯ ಆಶ್ರಯದಿಂದ 'ವನಿತಾಶ್ರಮ' ವೆಂಬ ಸಂಸ್ಥೆಯು ಸ್ಥಾಪನವಾಗಿರುವದು. ಆದರಲ್ಲಿ ಲಕ್ಷ್ಮೀ, ಸರಸ್ವತಿ, ಮತ್ತು ಸಾವಿತ್ರಿ, ಇವರು ಕೆಲಸ ಮಾಡುತ್ತಿರುವರು. ಅತ್ತೆ,-ಮಾವ ತಾಯಿ-ತಂದೆ, ಭಾವ-ಮೈದುನ, ಅಣ್ಣ—ತಮ್ಮ, ಅಕ್ಕ—ತಂಗಿ ಹಾಗು ಪರಮ ಪೂಜ್ಯ ಪತಿ, ಇವರೊಡನೆ ಹೇಗೆ ನಡಕೊಳ್ಳಬೇಕು. ಗೃಹಿಣಿಯರೂ ಸುಮಾತ್ರಗಳೂ ಅನಿಸಿಕೊಳ್ಳಬೇಕಾದರೆ ಹೇಗೆ ಹೇಗೆ ನಡೆಯಬೇಕು. ಇವೇ ಮೊದಲಾದ ನೀತಿಯ ನಿಯಮಗಳು ವನಿತಾಶ್ರಮದಲ್ಲಿ ಕಲಿಸಲ್ಪಡುತ್ತವೆ.

ರಘುನಾಥರಾಯರೂ ಗುರುನಾಥರಾಯರೂ, ತಮ್ಮ ತಮ್ಮ ಹೊಮ್ಮಕ್ಕಳನ್ನು ಆಡಿಸುತ್ತಲೂ ಸಮಾಜದ ಕಲ್ಯಾಣವನ್ನು ಬಯಸುತ್ತಲೂ ತಮ್ಮ ಕಾಲಹರಣ ಮಾಡುತ್ತಿರುವರು.

ಚಂಚಲೆಯ ಲಗ್ನಕ್ಕಾಗಿ ಆಳುಮೊರೆಗೆ ಬಂದ ಶ್ರೀನಿವಾಸರಾಯರು ಈಗ ಆನಂದದಿಂದ ಸಮಾಜದ ಹಿತಕ್ಕಾಗಿ ಹಗಲಿರುಳು ದಾವತಿ ಮಾಡುತ್ತಿರುವರು. ಈ ಸಮಾಜದ ಬಲದಿಂದ ಅವರ ಉಳಿದ ಹೆಣ್ಣುಮಕ್ಕಳ ಮದುವೆಗಳು ಏನೂ ಆತಂಕವಿಲ್ಲದೆ ಆದವು.

ಸುಗ್ರೀವಾಚಾರ್ಯರು ಸದ್ಯಕ್ಕೆ ಈ ಸಮಾಜ ಸೇವಾ ಸಂಸ್ಥೆಯೊಳ ವಾಚನಾಲಯದ ಕೆಲಸವನ್ನು ಒಳ್ಳೇ ಹುರುಪಿನಿಂದ ಮಾಡುತ್ತಿರುವರು.

ಧಾಬಾಯಿಯವರು ತಮ್ಮ ಚಿಕ್ಕ ಮಗಳಾದ ಸುಮನೆಯೊಡನೆ ಸೌದಾಮಿನಿಯ (ಲಕ್ಷ್ಮೀಬಾಯಿ) ಮನೆಯಲ್ಲಿ ಹರಿ, ಹರಿ, ಅನ್ನುತ್ತಾ ಕಾಲಕಳೆಯುತ್ತಿರುವರು.

ವಾಚಕರೇ, ಉಪಯುಕ್ತವೂ ಸರ್ವೋಪಯೋಗಿಯೂ ಆದ ಸಮಾಜ ಸೇವಾ ಸಂಸ್ಥೆಗೆ ಯಶಸ್ಸನ್ನು ಕೊಟ್ಟು ಅದರ ಬಯಕೆಗಳನ್ನು ಪೂರ್ಣ ಮಾಡಲೆಂದು ಆಸತ್ಯ ಸಂಕಲ್ಪನಾದ ಪರಮೇಶ್ವರನನ್ನು ನಾವೆಲ್ಲರೂ ಒಮ್ಮನಸಿನಿಂದಲೂ ಭಕ್ತಿಯಿಂದಲೂ ಪ್ರಾರ್ಥಿಸೋಣ.



ಶ್ರೀ ಭುವನೇಶ್ವರೀ ಗ್ರಂಥಮಾಲೆಯ

# ಹೊಸ ವಿಚಾರ



ಒಂದು ವರುಷದ ಅನುಭವದ ಮೇಲಿಂದ ಕನ್ನ ಡಿಗರಲ್ಲಿ ಕಾಣಬರುವಷ್ಟು ವಾಙ್ಮಯ ಉತ್ಸಾಹವೂ ಪ್ರೀತಿಯೂ ಕಂಡು ಬರಲಿಲ್ಲ. ಅದ್ದರಿಂದ ಈಗಿನ ಅಗ್ಗಳತೆಯ ಪರಿಸ್ಥಿತಿಯಲ್ಲಿ ವೈಭವದ ವಾಙ್ಮಯ ಸಂಸಾರವನ್ನು ಸಾಗಿಸುವದು ಬಿಗಿಯಾಗಿದೆ. ಆದುದ ರಿಂದ ನಾವು ಇನ್ನು ಮುಂದೆ ಬಡತನದ ರೀತಿಯಿಂ ದಲೇ ಅಚ್ಚು ಮೆಚ್ಚಾದ ಕಡಿಮೆ ಬೆಲೆಯುಳ್ಳ ಹೊತ್ತಿಗೆ ಗಳನ್ನು ಹೊರಡಿಸಿ, ಸಂದಿಗೊಂದಿಗಳಲ್ಲಿ ಪ್ರಚ ರ ಪಡಿಸಬೇಕೆಂದು ಗೊತ್ತು ಮಾಡಿರುವೆವು. ಗ್ರಂಥ ಗಳಿಗೆ ಕಾಲಾವಧಿಯಿಲ್ಲ. ಈ ಪ್ರಯತ್ನಕ್ಕಾದರೂ ಯಶಸ್ಸು ಬರುತ್ತದೋ ಹೇಗೆ ನೋಡಬೇಕಾಗಿದೆ.

ಬಿ. ಕಲ್ಯಾಣಶರ್ಮಾ.